KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜುಲೈ ೭, ೨೦೧೧ (ಆಷಾಢ ೧೬ ಶಕ ವರ್ಷ ೧೯೩೩) | ಸಂಚಿಕೆ ೨೭ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕರ್ನಾಟಕ ಸರ್ಕಾರ**

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಬೆಂಗಳೂರು**

**ಅಧಿಸೂಚನೆ**

**ಸಂ:ಕೃಮಾಇ/367/ನಿಯವಿ/2010, ಬೆಂಗಳೂರು, ದಿ:24/05/2011**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಪ್ರಕರಣ 6(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೃಷಿ ಮಾರಾಟ ನಿರ್ದೇಶಕರು ಬ್ಯಾಡಗಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟಿರುವ 112 ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಬ್ಯಾಡಗಿ ಪುರಸಭೆ ಪರಿಮಿತಿಯೊಳಗಿನ ಪ್ರದೇಶವನ್ನು 'ಮಾರುಕಟ್ಟೆ' ಎಂದು ಮತ್ತು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು ಮಾರುಕಟ್ಟೆ ಪ್ರಾಂಗಣ ಎಂದು ಘೋಷಿಸಿದ್ದರು.

**ಅನುಸೂಚಿ**

ಬ್ಯಾಡಗಿ ಪುರಸಭೆ ಪರಿಮಿತಿಯೊಳಗಿನ ಸರ್ವೆ ನಂ.191/1, 194(ಸಿಟಿಎಸ್ ನಂ.1807–1813), 195ಎ, 196ಎ, 196ಬಿ, 197/ಪಿ, 197/2ಎ, 198/1, 198/2, 198/3, 199, 201, 202, 203/1, 203/2, 203/3 ಮತ್ತು 206 ರಲ್ಲಿನ ಸಮಿತಿಯ ಒಡೆತನದಲ್ಲಿರುವ 60 ಎಕರೆ 38 ಗುಂಟೆ 25 ಚೌ ಯಾರ್ಡ್ ಕ್ಷೇತ್ರದ ಪ್ರದೇಶ ಮತ್ತು ಬ್ಯಾಡಗಿ ಮುಖ್ಯ ಮಾರುಕಟ್ಟೆ ಪ್ರಾಂಗಣಕ್ಕೆ ಹೊಂದಿಕೊಂಡು ಖಾಸಗಿ ಒಡೆತನದಲ್ಲಿರುವ ಬಿನ್ ಶೇತ್ಕಿ ಸರ್ವೆ ನಂ.200ಅ ಮತ್ತು 200ಬ ಒಟ್ಟು 6 ಎಕರೆ 33 ಗುಂಟೆಗಳ ಈ ಕೆಳಕಂಡ ಸೀಮಾಬದ್ಧ ಸ್ಥಳ.

ಪೂರ್ವಕ್ಕೆ : ಸರ್ವೆ ನಂ.192 (ರಾಮನಕಟ್ಟೆ ಕೆರೆ), ಶ್ರೀ ಸಿದ್ದೇಶ್ವರ ದೇವಸ್ಥಾನ.
ಬ್ಯಾಡಗಿ–ಹಂಸಭಾವಿ ರಸ್ತೆ ಮತ್ತು ಪಶ್ಚಿಮದ ಕಡೆಗೆ ಸರ್ವೆ ನಂ.197/ಬಿ

ಪಶ್ಚಿಮಕ್ಕೆ : ಸರ್ವೆ ನಂ.207, 216

ಉತ್ತರಕ್ಕೆ : ಬ್ಯಾಡಗಿ ತೆರೆದಹಳ್ಳಿ ರಸ್ತೆ,

ದಕ್ಷಿಣಕ್ಕೆ : ಸರ್ವೆ ನಂ.192, 191/2, 197/2ಬಿ ಹಾಗೂ ಗುಮ್ಮನಹಳ್ಳಿ ರಸ್ತೆ.

ಪ್ರಸ್ತುತ ಪ್ರಾಂಗಣಕ್ಕೆ ಹೊಂದಿಕೊಂಡಿರುವ ರಿ.ಸ. ನಂ.216/5ಅ, 216/5ಬ, 216/ಬ, 216/ಕ, 216/6 ರಲ್ಲಿನ 3 ಎಕರೆ 38 ಗುಂಟೆ ಜಮೀನಿನಲ್ಲಿ ಅಂಗಡಿ ನಿರ್ಮಿಸಿಕೊಂಡು ನಿಯಂತ್ರಿತ ಕೃಷಿ ಉತ್ಪನ್ನದಲ್ಲಿ ವಹಿವಾಟು ನಡೆಸುತ್ತಿರುವ 7 ವರ್ತಕರು ಸದರಿ ಪ್ರದೇಶವನ್ನು ಈಗಿರುವ ಮಾರುಕಟ್ಟೆ ಪ್ರಾಂಗಣಕ್ಕೆ ಸೇರಿಸಿ ಘೋಷಿಸಲು ಹಾಗೂ ಈ ಬಗ್ಗೆ ಸಮಿತಿಯು ವಿಧಿಸುವ ಷರತ್ತು ಮತ್ತು ನಿಬಂಧನೆಗಳನ್ನು ಪಾಲಿಸಲು ಸಿದ್ದರಿರುವುದಾಗಿ ತಿಳಿಸಿ ಸಲ್ಲಿಸಿದ ಮನವಿಯನ್ನು ಸಮಿತಿ ಪರಿಶೀಲಿಸಿ ಈಗಿರುವ ಪ್ರಾಂಗಣದ ಜೊತೆಗೆ 3 ಎಕರೆ 38 ಗುಂಟೆ ಜಮೀನನ್ನು ಸೇರಿಸಿಕೊಂಡು ಪ್ರಾಂಗಣ ವಿಸ್ತರಿಸುವ ಕುರಿತು ತೀರ್ಮಾನ ಕೈಗೊಂಡು ಸಲ್ಲಿಸಿರುವ ಪ್ರಸ್ತಾವನೆ ಪರಿಶೀಲಿಸಿದ್ದು, ಸಮಿತಿ ತೀರ್ಮಾನದಂತೆ ಈಗಿರುವ ಮಾರುಕಟ್ಟೆ ಪ್ರಾಂಗಣಕ್ಕೆ 3 ಎಕರೆ 38 ಗುಂಟೆ ಜಮೀನನ್ನು ಸೇರಿಸಿ ಮಾರುಕಟ್ಟೆ ಪ್ರಾಂಗಣ ವಿಸ್ತರಿಸಲು ಉದ್ದೇಶವನ್ನು ಅಧಿಸೂಚನೆ ಸಂ:ಕೃಮಾಇ/367/ನಿಯವಿ/2010,

ದಿ:09/02/2011 ರಲ್ಲಿ ಪ್ರಕಟಿಸಿದ್ದು ಸದರಿ ಅಧಿಸೂಚನೆಯನ್ನು ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ದಿ:13/02/2011 ರಲ್ಲಿ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ದಿ:31/03/2011 ರಲ್ಲಿ ಪ್ರಕಟಿಸಿ ಆಕ್ಷೇಪಣೆ ಹಾಗೂ ಸಲಹೆಗಳನ್ನು ಆಹ್ವಾನಿಸಲಾಗಿತ್ತು. ಸದರಿ ಅಧಿಸೂಚನೆಗೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆ/ಸಲಹೆಗಳು ಸ್ವೀಕೃತವಾಗಿರುವುದಿಲ್ಲ.

ಆದ್ದರಿಂದ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 3ನ್ನು ಓದಿ, ಕಲಂ 6(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ವಿ.ಬಿ.ಪಾಟೀಲ್ ಆದ ನಾನು, ಪ್ರಸ್ತುತ ಇರುವ ಮಾರುಕಟ್ಟೆ ಪ್ರಾಂಗಣಕ್ಕೆ ಸರ್ವೆ ನಂ.216/5ಅ, 216/5ಬ, 216/ಬ, 216/ಕ, 216/6 ರಲ್ಲಿನ 3 ಎಕರೆ 38 ಗುಂಟೆ ಜಮೀನನ್ನು ಸೇರಿಸಿ ಸಂಬಂಧಿಸಿದ ವರ್ತಕರಿಗೆ ಅನ್ವಯಿಸುವಂತೆ ಕೆಲವು ಷರತ್ತುಗಳನ್ನು ವಿಧಿಸಿ ಪ್ರಾಂಗಣ ವಿಸ್ತರಿಸಿ ಈ ಕೆಳಗಿನ ಅನುಸೂಚಿಯಲ್ಲಿ ನಿಗಧಿಪಡಿಸಿದಂತೆ ಮಾರುಕಟ್ಟೆ ಪ್ರಾಂಗಣವೆಂದು ಘೋಷಿಸಿದ್ದೇನೆ.

**ಅನುಸೂಚಿ**

ಬ್ಯಾಡಗಿ ಪುರಸಭೆ ಪರಿಮಿತಿಯೊಳಗಿನ ಸರ್ವೆ ನಂ.191/1, 194(ಸಿಟಿಎಸ್ ನಂ.1807–1813), 195ಎ, 196ಎ, 196ಬಿ, 197/ಪಿ, 197/2ಎ, 198/1, 198/2, 198/3, 199, 201, 202, 203/1, 203/2, 203/3 ಮತ್ತು 206 ರಲ್ಲಿನ ಸಮಿತಿಯ ಒಡೆತನದಲ್ಲಿರುವ 60 ಎಕರೆ 38 ಗುಂಟೆ 25 ಚೌ ಯಾರ್ಡ್ ಕ್ಷೇತ್ರದ ಪ್ರದೇಶ ಮತ್ತು ಬ್ಯಾಡಗಿ ಮುಖ್ಯ ಮಾರುಕಟ್ಟೆ ಪ್ರಾಂಗಣಕ್ಕೆ ಹೊಂದಿಕೊಂಡು ಖಾಸಗಿ ಒಡೆತನದಲ್ಲಿರುವ ಬಿನ್ ಶೇತ್ಕಿ ಸರ್ವೆ ನಂ.200ಅ ಮತ್ತು 200ಬ ಒಟ್ಟು 6 ಎಕರೆ 33 ಗುಂಟೆ ಹಾಗೂ ನಂ.216/5ಅ, 216/5ಬ, 216/ಬ, 216/ಕ, 216/6 ರಲ್ಲಿನ 3 ಎಕರೆ 38 ಗುಂಟೆ ಜಮೀನನ್ನು ಸೇರಿಸಿದ ಈ ಕೆಳಕಂಡ ಸೀಮಾಬದ್ದ ಸ್ಥಳ.

ಪೂರ್ವಕ್ಕೆ : ಸರ್ವೆ ನಂ.192 (ಪುರಸಭೆ ಮಳಿಗೆಗಳು), ಶ್ರೀ ಸಿದ್ದೇಶ್ವರ ದೇವಸ್ಥಾನ.
ಬ್ಯಾಡಗಿ–ಹಂಸಭಾವಿ ರಸ್ತೆ ಮತ್ತು ಪಶ್ಚಿಮದ ಕಡೆಗೆ ಸರ್ವೆ ನಂ.197/ಬಿ

ಪಶ್ಚಿಮಕ್ಕೆ : ಸರ್ವೆ ನಂ.216/4ಅ, 216/4ಬ, 216/4ಕ, 216/4ಡ ಖಾಸಗಿ ಜಮೀನು.

ಉತ್ತರಕ್ಕೆ : ಬ್ಯಾಡಗಿ ತೆರೆದಹಳ್ಳಿ ರಸ್ತೆ, ರಿ.ಸ ನಂ.216/3

ದಕ್ಷಿಣಕ್ಕೆ : ಸರ್ವೆ ನಂ.192, 191/2, 197/2ಬಿ ಹಾಗೂ ಗುಮ್ಮನಹಳ್ಳಿ ರಸ್ತೆ, ಸರ್ವೆ ನಂ.207/ಎ.

ಪಿ.ಆರ್.574

**ವಿ.ಬಿ. ಪಾಟೀಲ್**
ನಿರ್ದೇಶಕರು

**BANGALORE WATER SUPPLY AND SEWERAGE BOARD**

**III Floor, Cauvery Bhavan, K.G. Road, Bengalooru-560 009**

**NOTIFICATION**

**No. BWSSB/CH/CE(QA)/ TAQA/1099/10-11, Dated:20.06.2011**

In exercise of the powers conferred by Sections 72-A and 88 of Bangalore Water Supply and Sewerage Act, 1964 (Karnataka Act 36 of 1964) and all other powers enabling it in this behalf, and with the approval of the Government of Karnataka accorded in Government Order No.UDD 306 MNI 2010, Dated:21st April, 2011, the Bangalore Water Supply and Sewerage Board hereby makes the following Regulations, the draft of the said Regulations having been published as required by sub-section (2) of Section 88 of the said Act, in Notification No.BWSSB/CH/CE/(QA)/TAQA/242/2011-12 Dated:26th April, 2011 duly published in part-III, Page 1421 of the Karnataka Gazette, Dated May 5th, 2011.

**REGULATIONS**

**1. Title and Commencement:**

(1) These Regulations may be called the Bangalore Water Supply and Sewerage (Rain water Harvesting) (Amendment) Regulations, 2011.

(2) They shall come into force from the date of their publication in the Official Gazette.

**2. Insertion of new regulation 8:** In the Bangalore Water Supply and Sewerage (Rain Water Harvesting) Regulations, 2010, after regulation 7, the following shall be inserted, namely:

**8. Disconnection of water supply:** Where the owner or occupier of the building fails to provide rain water Harvesting structure in the building within such date as modified under section 72A of the Act, water supply connection provided to such building may be disconnected.

Provided that, "no disconnection shall be made as above unless an opportunity of being heard is given to the affected persons."

Chairman
Bangalore Water Supply and
Sewerage Board, Bangalore.

PD-82

**ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು.**

**ಭೂಸ್ವಾಧೀನ ಕಾಯ್ದೆ ಕಲಂ. 4(1) ಕರ್ನಾಟಕ ತಿದ್ದುಪಡಿ ಕಾಯ್ದೆ 33/91 ರ ಅನ್ವಯ ಅಧಿಸೂಚನೆ**

**ಕ್ರಮಾಂಕ: ಕಗೃಮಂ./ಭೂಸ್ವಾವಿ./ ಶಿವಮೊಗ್ಗ-ಕಾನುಕೊಪ್ಪ/ 9 /2010-11 ದಿನಾಂಕ:5 ನೇ ಫೆಬ್ರವರಿ- 2011**

ಈ ಅಧಿಸೂಚನೆಯ ಅನುಬಂಧದಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಕರ್ನಾಟಕ ಗೃಹ ಮಂಡಳಿಯು ನಿವೇಶನ / ಮನೆಗಳನ್ನು ಕಟ್ಟಲು ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಕಂಡು ಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ, 1894 ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2) ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ, ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991 ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3 ರ ಪ್ರಕರಣದ ಮೇರೆಗೆ ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು.ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲಿ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರವರ ಮಂಜೂರಾತಿಯನ್ನು ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಬಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24 ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಪರಿಶಿಷ್ಟ**

**ಜಿಲ್ಲೆ: ಶಿವಮೊಗ್ಗ ತಾಲ್ಲೂಕು: ಸೊರಬ ಹೋಬಳಿ: ಕಸಬಾ ಗ್ರಾಮ: ಕಾನುಕೊಪ್ಪ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ-ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | ಮರಿಯಪ್ಪ, ರಾಮಪ್ಪ, ಲಕ್ಷ್ಮೀಕಾಂತಪ್ಪ, ಪೌವತಿ ಮಗ ಶಿವಾನಂದಪ್ಪ | ಮರಿಯಪ್ಪ, ರಾಮಪ್ಪ, ಲಕ್ಷ್ಮೀಕಾಂತಪ್ಪ, ಪೌವತಿ ಮಗ ಶಿವಾನಂದಪ್ಪ | 2/p | ತರಿ | ಕೊಡಕಣಿ ಗ್ರಾಮದ ಗಡಿ | ಹಿರೆಶಕುನ ಗ್ರಾಮದ ಸರ್ವೆ ನಂ 64 | ರಸ್ತೆ | ಕೊಡಕಣಿ ಗ್ರಾಮದ ಗಡಿ | 2-13 | 13.53 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ ಪೂರ್ವ ಸ.ನಂ. | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |
| 2. | ರೇಣುಕಮ್ಮ ಕೋಂ ಬಸವರಾಜಪ್ಪ | ರೇಣುಕಮ್ಮ | 2/p1 | ತರಿ | ಕೊಡಕಣಿ ಗ್ರಾಮದ ಗಡಿ | ಹಿರೆಶಕುನ ಗ್ರಾಮದ ಸರ್ವೆ ನಂ 64 | ರಸ್ತೆ | ಕೊಡಕಣಿ ಗ್ರಾಮದ ಗಡಿ | 0-35 | 3.26 |
| 3. | ಕರಜ್ಜಿ ದುರುಗಪ್ಪ ಬಿನ್ ದೊಡ್ಡಪ್ಪ | ಕರಜ್ಜಿ ದುರುಗಪ್ಪ ಬಿನ್ ದೊಡ್ಡಪ್ಪ | 2/p2 | ತರಿ | ಕೊಡಕಣಿ ಗ್ರಾಮದ ಗಡಿ | ಹಿರೆಶಕುನ ಗ್ರಾಮದ ಸರ್ವೆ ನಂ 64 | ರಸ್ತೆ | ಕೊಡಕಣಿ ಗ್ರಾಮದ ಗಡಿ | 3-04 | 16.01 |
| 4. | ಕರಜ್ಜಿ ದುರುಗಪ್ಪ ಬಿನ್ ದೊಡ್ಡಪ್ಪ | ಕರಜ್ಜಿ ದುರುಗಪ್ಪ ಬಿನ್ ದೊಡ್ಡಪ್ಪ | 2/p3 | ಖುಷ್ಕಿ | ಕೊಡಕಣಿ ಗ್ರಾಮದ ಗಡಿ | ಹಿರೆಶಕುನ ಗ್ರಾಮದ ಸರ್ವೆ ನಂ 64 | ರಸ್ತೆ | ಕೊಡಕಣಿ ಗ್ರಾಮದ ಗಡಿ | 0-32 | 0.25 |
| 5. | ಗೂಳಿ ಹುಚ್ಚಮ್ಮ ಕೋಂ ಕೆರಿಯಪ್ಪ | ಗೂಳಿ ಹುಚ್ಚಮ್ಮ ಕೋಂ ಕೆರಿಯಪ್ಪ | 2/p4 | ತರಿ | ಕೊಡಕಣಿ ಗ್ರಾಮದ ಗಡಿ | ಹಿರೆಶಕುನ ಗ್ರಾಮದ ಸರ್ವೆ ನಂ 64 | ರಸ್ತೆ | ಕೊಡಕಣಿ ಗ್ರಾಮದ ಗಡಿ | 3-23 | 13.05 |
| 6. | ಗೌರಮ್ಮ ಕೋಂ ಬಂಗಾರಪ್ಪ, | ಗೌರಮ್ಮ ಕೋಂ ಬಂಗಾರಪ್ಪ, | 2/p5 | ಖುಷ್ಕಿ | ಕೊಡಕಣಿ ಗ್ರಾಮದ ಗಡಿ | ಹಿರೆಶಕುನ ಗ್ರಾಮದ ಸರ್ವೆ ನಂ 64 | ರಸ್ತೆ | ಕೊಡಕಣಿ ಗ್ರಾಮದ ಗಡಿ | 6-29 | 20.00 |

**ಘೋಷ್ವಾರೆ**

**ಗ್ರಾಮ: ಕಾನುಕೊಪ್ಪ**

| ತರಹೆ | ವಿಸ್ತೀರ್ಣ ಎ–ಗುಂ |
|---|---|
| ಖುಷ್ಕಿ | 7-21 |
| ತರಿ | 9-35 |
| **ಒಟ್ಟು** | **17-16** |

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

ಪಿಡಿ–85

**ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು.**

**ಭೂಸ್ವಾಧೀನ ಕಾಯ್ದೆ ಕಲಂ. 4(1) ಕರ್ನಾಟಕ ತಿದ್ದುಪಡಿ ಕಾಯ್ದೆ 33/91 ರ ಅನ್ವಯ ಅಧಿಸೂಚನೆ**

**ಕ್ರಮಾಂಕ: ಕಗೃಮಂ./ಭೂಸ್ವಾವಿ./ ಶಿವಮೊಗ್ಗ– ಕುಗ್ವೆ / 4 /2010–11 ದಿನಾಂಕ: 24ನೇ ಫೆಬ್ರವರಿ– 2011**

ಈ ಅಧಿಸೂಚನೆಯ ಅನುಬಂಧದಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಕರ್ನಾಟಕ ಗೃಹ ಮಂಡಳಿಯ ನಿವೇಶನ / ಮನೆಗಳನ್ನು ಕಟ್ಟಲು ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಕಂಡು ಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ, 1894 ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2) ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ, ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991 ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3 ರ ಪ್ರಕರಣದ ಮೇರೆಗೆ ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು.ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲಿ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರವರ ಮಂಜೂರಾತಿಯನ್ನು ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಬಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24 ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಪರಿಶಿಷ್ಟ**

**ಜಿಲ್ಲೆ : ಶಿವಮೊಗ್ಗ ತಾಲ್ಲೋಕು: ಸಾಗರ ಕಸಬ: ತಾಳಗುಪ್ಪ ಗ್ರಾಮ: ಕುಗ್ವೆ**

| ಕ್ರ ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ ಹಿಸ್ಸಾ ನಂ | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | ಸರ್ಕಾರಿ ಜಮೀನು | ಪುಟ್ಟನಾಯ್ಕ ಬಿನ್ ರಾಮನಾಯ್ಕ | 111 | ಖುಷ್ಕಿ | ರೈಲ್ವೆ ರಸ್ತೆ | 128& 40 | ರೈಲ್ವೆ ರಸ್ತೆ & 128& 40 | 127 & 128 | 39-14 | 5.00 |
| 2. | ಬಂಗಾರಪ್ಪ ಬಿನ್ ದೊಡ್ಡದ್ಯಾವನಾಯ್ಕ | ಬಂಗಾರಪ್ಪ ಬಿನ್ ದೊಡ್ಡದ್ಯಾವನಾಯ್ಕ | 126/1B1 | ಖುಷ್ಕಿ | 115 ರಿಂದ 120 | 127 | 111 | 131 | 01-13 | 0.36 |

| ಕ್ರ ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ ಹಿಸ್ಸಾ ನಂ | ತರಹೆ | ಚಕ್ಕುಬಂದಿ ಪೂರ್ವ ಸ.ನಂ | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |
| 3. | ಬಾಣದ ರಾಮನಾಯ್ಕ ಬಿನ್ ಹುಚ್ಚ ನಾಯ್ಕ | ಬಾಣದ ರಾಮನಾಯ್ಕ ಬಿನ್ ಹುಚ್ಚ ನಾಯ್ಕ | 126/2 ಅ | ಖುಷ್ಕಿ | 115 ರಿಂದ 120 | 127 | 111 | 131 | 0-15 | 0.11 |
| 4. | ಬಾಣದ ರಾಮನಾಯ್ಕ ಬಿನ್ ಹುಚ್ಚ ನಾಯ್ಕ | ಬಾಣದ ರಾಮನಾಯ್ಕ ಬಿನ್ ಹುಚ್ಚ ನಾಯ್ಕ | 126/2ಬ | ಖುಷ್ಕಿ | 115 ರಿಂದ 120 | 127 | 111 | 131 | 08-13 | 0.25 |
| 5. | ಮರಿಯಮ್ಮ ಕೋಂ ರಾಮನಾಯ್ಕ, ಕರಿಯಮ್ಮ ಬಿನ್ ರಾಮನಾಯ್ಕ, ಬಂಗಾರಪ್ಪ ಬಿನ್ ದೊಡ್ಡದ್ಯಾವನಾಯ್ಕ ಬೈರಮ್ಮ ಕೋಂ ದುರ್ಗಪ್ಪ | ಮರಿಯಮ್ಮ ಕೋಂ ರಾಮನಾಯ್ಕ, ಕರಿಯಮ್ಮ ಬಿನ್ ರಾಮನಾಯ್ಕ, ಬಂಗಾರಪ್ಪ ಬಿನ್ ದೊಡ್ಡದ್ಯಾವನಾಯ್ಕ ಬೈರಮ್ಮ ಕೋಂ ದುರ್ಗಪ್ಪ | 127/1 | ಖುಷ್ಕಿ | 126 | 128& 129 | 111 | 131 | 12-04 | 3.51 |
| 6. | ಹುಚ್ಚಪ್ಪ ಬಿನ್ ಮಾಸ್ತನಾಯ್ಕ ಶಿವಪ್ಪ ಬಿನ್ ಮಾಸ್ತನಾಯ್ಕ ಗಣಪತಿ ಬಿನ್ ಮಾಸ್ತನಾಯ್ಕ ಬೈರಮ್ಮ ಕೋಂ ದುರ್ಗಪ್ಪ | ಹುಚ್ಚಪ್ಪ ಬಿನ್ ಮಾಸ್ತನಾಯ್ಕ ಶಿವಪ್ಪ ಬಿನ್ ಮಾಸ್ತನಾಯ್ಕ ಗಣಪತಿ ಬಿನ್ ಮಾಸ್ತನಾಯ್ಕ ಬೈರಮ್ಮ ಕೋಂ ದುರ್ಗಪ್ಪ | 127/2 | ಖುಷ್ಕಿ | 126 | 128& 129 | 111 | 131 | 8-25 | 2.50 |
| 7. | ಬೈರಮ್ಮ ಕೋಂ ದುರ್ಗಪ್ಪ ಹುಚ್ಚಪ್ಪ ಬಿನ್ ಮಾಸ್ತನಾಯ್ಕ ದುರ್ಗನಾಯ್ಕ | ಬೈರಮ್ಮ ಕೋಂ ದುರ್ಗಪ್ಪ ಹುಚ್ಚಪ್ಪ ಬಿನ್ ಮಾಸ್ತನಾಯ್ಕ ದುರ್ಗನಾಯ್ಕ | 127/3 | ಖುಷ್ಕಿ | 126 | 128& 129 | 111 | 131 | 1-05 | 0-33 |
| 8. | ಎಸ್.ವಿ. ಪದ್ಮವತಿ ಬಿನ್ ಜ್ವೆಂಕಟಗಿರಿಯಪ್ಪ | ಎಸ್.ವಿ. ಪದ್ಮವತಿ ಬಿನ್ ಜ್ವೆಂಕಟಗಿರಿಯಪ್ಪ | 127/4 | ಖುಷ್ಕಿ | 126 | 128& 129 | 111 | 131 | 1-00 | 0.29 |
| 9. | ಜ್ಯೋತಿ ಕೋಂ ಪಿ.ಟಿ. ಸ್ವಾಮಿ | ಜ್ಯೋತಿ ಕೋಂ ಪಿ.ಟಿ. ಸ್ವಾಮಿ | 127/5 | ಖುಷ್ಕಿ | 126 | 128& 129 | 111 | 131 | 0-20 | 0-15 |

| ಕ್ರ ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ ಹಿಸ್ಸಾ ನಂ | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 10. | ಜಿ.ರಮೇಶ್ ಬಿನ್ ಗೋಣಿಶಿವಪ್ಪ | ಜಿ.ರಮೇಶ್ ಬಿನ್ ಗೋಣಿಶಿವಪ್ಪ | 127/6 | ಖುಷ್ಕಿ | 126 | 128& 129 | 111 | 131 | 2-04 | 0.61 |
| 11. | ಹೆಚ್.ಎಲ್.ರಾಘವೇಂದ್ರ ಬಿನ್ ಲಿಂಗಪ್ಪ | ಹೆಚ್.ಎಲ್.ರಾಘವೇಂದ್ರ ಬಿನ್ ಲಿಂಗಪ್ಪ | 127/7 | ಖುಷ್ಕಿ | 126 | 128& 129 | 111 | 131 | 0-20 | 0-15 |
| 12. | ಹೆಚ್.ಎಲ್.ರಾಘವೇಂದ್ರ ಬಿನ್ ಲಿಂಗಪ್ಪ | ಹೆಚ್.ಎಲ್.ರಾಘವೇಂದ್ರ ಬಿನ್ ಲಿಂಗಪ್ಪ | 127/8 | ಖುಷ್ಕಿ | 126 | 128& 129 | 111 | 131 | 0-18 | 0.13 |
| 13. | ಎಂ. ರಾಮಪ್ಪ ಬಿನ್ ಮಾದನತಿಮ್ಮಾನಾಯ್ಕ | ಎಂ. ರಾಮಪ್ಪ ಬಿನ್ ಮಾದನತಿಮ್ಮಾನಾಯ್ಕ | 128/1 | ಖುಷ್ಕಿ | 127 | 33 ರಿಂದ 39 | 111 | 129 | 8-22 | 1.89 |
| 14. | ದೇವಮ್ಮ ಕೋಂ ಹುಚ್ಚನಾಯ್ಕ ರಾಮಪ್ಪ ಬಿನ್ ಹುಚ್ಚನಾಯ್ಕ | ದೇವಮ್ಮ ಕೋಂ ಹುಚ್ಚನಾಯ್ಕ ರಾಮಪ್ಪ ಬಿನ್ ಹುಚ್ಚನಾಯ್ಕ | 128/2 | ಖುಷ್ಕಿ | 127 | 33 ರಿಂದ 39 | 111 | 129 | 8-18 | 1-86 |
| 15. | ಬಾಣದ ರಾಮನಾಯ್ಕ ಬಿನ್ ಹುಚ್ಚ ನಾಯ್ಕ | ಬಾಣದ ರಾಮನಾಯ್ಕ ಬಿನ್ ಹುಚ್ಚ ನಾಯ್ಕ | 131/1A | ಖುಷ್ಕಿ | 120 | 130 | 111 | 129 | 19-02 0-06(ಖ) | 05.48 |

**ಫೋಪ್ವಾರೆ**

**ಗ್ರಾಮ: ಕುಗ್ವೆ**

| ತರಹೆ | ಒಟ್ಟು ವಿಸ್ತೀರ್ಣ ಎ–ಗು |
|---|---|
| ಖುಷ್ಕಿ | 101–27 |
| ಖರಾಬ್ | 0–06 |
| **ಒಟ್ಟು** | **101–33** |

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

ಪಿಡಿ–83

**ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು.**

**ಭೂಸ್ವಾಧೀನ ಕಾಯ್ದೆ ಕಲಂ. 4(1) ಕರ್ನಾಟಕ ತಿದ್ದುಪಡಿ ಕಾಯ್ದೆ 33/91 ರ ಅನ್ವಯ ಅಧಿಸೂಚನೆ**

**ಕ್ರಮಾಂಕ: ಕಗೃಮಂ./ಭೂಸ್ವಾವಿ./ ಶಿವಮೊಗ್ಗ–ಸೋಮಿನಕೊಪ್ಪ. ಮತ್ತು ಬಸವನಗಂಗೂರು /7 /2010–11 ದಿನಾಂಕ: 5ನೇ ಫೆಬ್ರವರಿ– 2011**

ಈ ಅಧಿಸೂಚನೆಯ ಅನುಬಂಧದಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಕರ್ನಾಟಕ ಗೃಹ ಮಂಡಳಿಯು ನಿವೇಶನ / ಮನೆಗಳನ್ನು ಕಟ್ಟಲು ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಕಂಡು ಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ, 1894 ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2) ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ, ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991 ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3 ರ ಪ್ರಕರಣದ ಮೇರೆಗೆ ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು.ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲಿ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಅಭಿವೃದ್ದಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರವರ ಮಂಜೂರಾತಿಯನ್ನು ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಬಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24 ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಪರಿಶಿಷ್ಟ**

**ಜಿಲ್ಲೆ : ಶಿವಮೊಗ್ಗ ತಾಲ್ಲೋಕು: ಶಿವಮೊಗ್ಗ, ಕಸಬ: ಹೋಬಳಿ, ಗ್ರಾಮ: ಸೋಮಿನಕೊಪ್ಪ.**

| ಕ್ರಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ ಹಿಸ್ಸಾ ನಂ | | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| | | | | ತರಹೆ | ಪೂರ್ವ ಸ.ನಂ | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | | |
| 1 | 2 | 3 | 4 | 6 | 8 | 9 | 10 | 11 | 5 | 7 |
| 1. | ಎ.ಆರ್.ನಾಗರಾಜ್ ಬಿನ್ ರಾಮಕೃಷ್ಣಯ್ಯ, ಗೋಕರ್ಣ ಮಂಡಳಾಧೀಶ್ವರ ಶ್ರೀಶ್ರೀಶ್ರೀ. ರಾಘವೇಶ್ವರ ಭಾರತಿ ಸ್ವಾಮಿಜಿ ಯವರು | ಎ.ಆರ್.ನಾಗರಾಜ್ ಬಿನ್ ರಾಮಕೃಷ್ಣಯ್ಯ .ಗೋಕರ್ಣ ಮಂಡಳಾಧೀಶ್ವರ ಶ್ರೀಶ್ರೀಶ್ರೀ. ರಾಘವೇಶ್ವರ ಭಾರತಿ ಸ್ವಾಮಿಜಿ ಯವರು | 69 | ಖುಷ್ಕಿ | 70, 73, 74/1 | 47, ಕೆರೆ | ಹೊಸೂರು ಗಡಿ | 65, 66, 68 | 11-20 0-31 (ಖ) | 10-28 |

| ಕ್ರಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ ಹಿಸ್ಸಾ ನಂ | ತರಹೆ | ಚಕ್ಕುಬಂದಿ ಪೂರ್ವ ಸ.ನಂ | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| 1 | 2 | 3 | 4 | 6 | 8 | 9 | 10 | 11 | 5 | 7 |
| 2. | ಎಸ್. ಹರೀಶ್ ಬಿನ್ ಲೇಟ್.ಜಿ.ಶರಣಬಸಪ್ಪ, ಎಸ್.ಸವಿತಾ ಕೋಂ ಕೆ.ಟಿ.ವಾಗೀಶ, ಎಸ್. ಗಿರೀಶ್ ಬಿನ್ ಲೇಟ್.ಜಿ.ಶರಣಬಸಪ್ಪ, | ಎಸ್. ಹರೀಶ್ ಬಿನ್ ಲೇಟ್.ಜಿ.ಶರಣಬಸಪ, ಎಸ್.ಸವಿತಾ ಕೋಂ ಕೆ.ಟಿ.ವಾಗೀಶ, ಎಸ್. ಗಿರೀಶ್ ಬಿನ್ ಲೇಟ್.ಜಿ.ಶರಣಬಸಪ್ಪ, | 70/1 | ಖುಷ್ಕಿ | 71 | 69 | ಹೊಸೂರು ಗಡಿ | 73 | 4-15 ½<br>0-15 (ಖ) | 3-48 |
| 3. | ಬದರೀದಾಸ ಬಿನ್ ಜಯರಾಂದಾಸ್ | ಬದರೀದಾಸ ಬಿನ್ ಜಯರಾಂದಾಸ್, | 70/2 | ಖುಷ್ಕಿ | 71 | 69 | ಹೊಸೂರು ಗಡಿ | 73 | 1-00 | 0-79 |
| 4. | ಬದರೀದಾಸ ಬಿನ್ ಜಯರಾಂದಾಸ್ | ಬದರೀದಾಸ ಬಿನ್ ಜಯರಾಂದಾಸ್ | 70/3 | ಖುಷ್ಕಿ | 71 | 69 | ಹೊಸೂರು ಗಡಿ | 73 | 0-19 ½ | 0-38 |
| 5. | ಭಾಗ್ಯಮ್ಮ ಕೋಂ ದಿ.ಚಿನ್ನರಾಜು, ಮುನಿಯಪ್ಪ ಬಿನ್ ದಿ//ಚಿನ್ನರಾಜು, ಮಂಜುನಾಥ ಬಿನ್ ದಿ//ಚಿನ್ನರಾಜು, ಈಶ್ವರ ಬಿನ್ ದಿ//ಚಿನ್ನರಾಜು, ಗೌರಮ್ಮ ಬಿನ್ ದಿ//ಚಿನ್ನರಾಜು, ಕಾಳಿಯಮ್ಮ ಬಿನ್ ದಿ//ಚಿನ್ನರಾಜು, | ಭಾಗ್ಯಮ್ಮ, ಮುನಿಯಪ್ಪ, ಮಂಜುನಾಥ, ಈಶ್ವರ, ಗೌರಮ್ಮ, ಕಾಳಿಯಮ್ಮ | 71 | ತರಿ | ಬಸವನ ಗಂಗೂರು ಗಡಿ | 70 | ಹೊಸೂರು ಗಡಿ | 72 | 2-34 | 4-00 |
| 6. | ಫಾತಿಮಾ, ಅಹ್ಮದ್ ಜಾನ್, ಅಲ್ತಾಫ್ ಅಹ್ಮದ್, ಜಿಯಾವುಲ್ಲಾ, ಸಾದಿಕುಲ್ಲಾ, ಜಕ್ರಿಯಾ, | ಫಾತಿಮಾ, ಅಹ್ಮದ್ ಜಾನ್, ಅಲ್ತಾಫ್ ಅಹ್ಮದ್, ಜಿಯಾ ವುಲ್ಲಾ, ಸಾದಿಕುಲ್ಲಾ, ಜಕ್ರಿಯಾ, | 73/1 | ಖುಷ್ಕಿ | 71, 72 | 69 | 70 | 74/1 | 1-34<br>0-05(ಖ) | 1-00 |

| ಕ್ರಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ ಹಿಸ್ಸಾ ನಂ | ತರಹೆ | ಚಕ್ಕುಬಂದಿ ಪೂರ್ವ ಸ.ನಂ | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| **1** | **2** | **3** | **4** | **6** | **8** | **9** | **10** | **11** | **5** | **7** |
| 7. | ಭಾಗ್ಯಮ್ಮ ಕೋಂ ದಿ.ಚಿನ್ನರಾಜು, ಮುನಿಯಪ್ಪ ಬಿನ್ ದಿ//ಚಿನ್ನರಾಜು, ಮಂಜುನಾಥ ಬಿನ್ ದಿ//ಚಿನ್ನರಾಜು, ಈಶ್ವರ ಬಿನ್ ದಿ//ಚಿನ್ನರಾಜು, ಗೌರಮ್ಮ ಬಿನ್ ದಿ//ಚಿನ್ನರಾಜು, ಕಾಳಿಯಮ್ಮ ಬಿನ್ ದಿ//ಚಿನ್ನರಾಜು, | ಭಾಗ್ಯಮ್ಮ,<br>ಮುನಿಯಪ್ಪ,<br>ಮಂಜುನಾಥ,<br>ಈಶ್ವರ,<br>ಗೌರಮ್ಮ,<br>ಕಾಳಿಯಮ್ಮ | 73/2 | ಖುಷ್ಕಿ | 71, 72 | 69 | 70 | 74/1 | 0-28 | 1-00 |
| 8. | ಮಹ್ಮದ್ ಮುನೀರ್ ಸಾಬ್ ಬಿನ್ ಅಬ್ದುಲ್ ಸತ್ತಾರ್ | ಮಹ್ಮದ್ ಮುನೀರ್ ಸಾಬ್ | 75 | ಖುಷ್ಕಿ | 74/3 | 62, 67, 68 | 74/3 | 76 | 5-02 | 6-32 |
| 9. | ವೈ.ಎಸ್. ಸೂರ್ಯನಾರಾಯಣ ಜೋಯಿಸ್ ಬಿನ್ ಶಂಕರನಾರಾಯಣ ಜೋಯಿಸ್ | ವೈ.ಎಸ್. ಸೂರ್ಯನಾರಾಯಣ ಜೋಯಿಸ್ | 93 | ತರಿ | 94 & ಬಸವನ ಗಂಗೂರು ಗಡಿ | ರಸ್ತೆ | 72, 74/3P | 81 & ಹಳ್ಳ | 7-00<br>0-26(ಖ) | 9-00 |
| **ಜಿಲ್ಲೆ : ಶಿವಮೊಗ್ಗ** | | | **ತಾಲ್ಲೂಕು: ಶಿವಮೊಗ್ಗ** | | **ಹೊಳಲೂರು: ಹೋಬಳಿ,** | | | **ಗ್ರಾಮ: ಬಸವನಗಂಗೂರು.** | | |
| **1** | **2** | **3** | **4** | **5** | **6** | **7** | **8** | **9** | **10** | **11** |
| 1 | ಎಲ್. ಮಂಜುನಾಥ ಬಿನ್ ಬಿ.ಎಲ್. ಲಕ್ಕಪ್ಪ | ಎಲ್. ಮಂಜುನಾಥ ಬಿನ್ ಬಿ.ಎಲ್. ಲಕ್ಕಪ್ಪ | 90/1 | ಖುಷ್ಕಿ | 90/4, 90/3 | 91 | 93 | 90/2 | 5-00 | 16-00 |
| 2 | ಎಲ್. ಮಂಜುನಾಥ ಬಿನ್ ಬಿ.ಎಲ್. ಲಕ್ಕಪ್ಪ | ಎಲ್. ಮಂಜುನಾಥ ಬಿನ್ ಬಿ.ಎಲ್. ಲಕ್ಕಪ್ಪ | 90/1 | ಖುಷ್ಕಿ | 90/4, 90/3 | 91 | 93 | 90/2 | 4-36 | 15-00 |
| 3 | ಕೆ.ಪಿ. ಬಿಂದು ಕುಮಾರ್ ಬಿನ್ ಮಹದೇವಪ್ಪ | ಕೆ.ಪಿ. ಬಿಂದು ಕುಮಾರ್ ಬಿನ್ ಮಹದೇವಪ್ಪ | 90/2A | ಖುಷ್ಕಿ | 90/2B | 91 | 90/1 | ಸೋಮಿನ ಕೊಪ್ಪ ಗಡಿ | 1-20 | 11-00 |
| 4 | ಕೆ.ಪಿ. ಮಹೇಂದ್ರ ಕುಮಾರ್ ಬಿನ್ ಮಹದೇವಪ್ಪ | ಕೆ.ಪಿ. ಮಹೇಂದ್ರ ಕುಮಾರ್ ಬಿನ್ ಮಹದೇವಪ್ಪ | 90/2B | ಖುಷ್ಕಿ | 90/2C | 90/2A | 90/1 | ಸೋಮಿನ ಕೊಪ್ಪ ಗಡಿ | 3-00 | 20-00 |

| ಕ್ರಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ ಹಿಸ್ಸಾ ನಂ | ತರಹೆ | ಚಕ್ಕುಬಂದಿ ಪೂರ್ವ ಸ.ನಂ | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | ಒಟ್ಟು ವಿಸ್ತೀರ್ಣ ಎ-ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| **1** | **2** | **3** | **4** | **6** | **8** | **9** | **10** | **11** | **5** | **7** |
| 5 | ಕೆ.ಪಿ. ಕೊಟ್ರೇಶ್ ಬಿನ್ ಮಹದೇವಪ್ಪ | ಕೆ.ಪಿ. ಕೊಟ್ರೇಶ್ ಬಿನ್ ಮಹದೇವಪ್ಪ | 90/2C | ಖುಷ್ಕಿ | 90/2D | 90/2B | 90/3 | ಸ.ನಂ 88, 89 | 4-00 | 24-00 |
| 6 | ಮಂಗಳಮ್ಮ ಕೋಂ ಲೇಟ್ ಕೆ.ಪಿ. ಮಹದೇವಪ್ಪ | ಮಂಗಳಮ್ಮ ಕೋಂ ಲೇಟ್ ಕೆ.ಪಿ. ಮಹದೇವಪ್ಪ | 90/2D | ಖುಷ್ಕಿ | 97 | 90/2C | 90/3 | 88 | 1-19<br>0-03(ಖ) | 10-00 |
| 7 | ಎಲ್. ಮಂಜುನಾಥ ಬಿನ್ ಬಿ.ಎಲ್.ಲಕ್ಕಪ್ಪ | ಎಲ್. ಮಂಜುನಾಥ ಬಿನ್ ಬಿ.ಎಲ್.ಲಕ್ಕಪ್ಪ | 91 | ತರಿ | 90 | ಸೋಮಿನ ಕೊಪ್ಪ ಗಡಿ | 92 | ಸೋಮಿನಕೊಪ್ಪ ಗಡಿ | 3-34 | 6-00 |
| 8 | ಶಿವರಾಮಪ್ಪ ಬಿನ್ ಲಕ್ಕಪ್ಪ | ಶಿವರಾಮಪ್ಪ ಬಿನ್ ಲಕ್ಕಪ್ಪ | 92 | ಖುಷ್ಕಿ | 93 | ಸೋಮಿನ ಕೊಪ್ಪ ಗಡಿ | 102 | 91 | 3-30 | 24-00 |
| 9 | ಬಿ.ಎಲ್.ಶಿವರಾಮಪ್ಪ<br>ಅನಂದಮ್ಮ ಕೋಂ ಬಿ.ಎಲ್.ಶಿವರಾಮಪ್ಪ | ಬಿ.ಎಲ್.ಶಿವರಾಮಪ್ಪ<br>ಅನಂದಮ್ಮ ಕೋಂ ಬಿ.ಎಲ್.ಶಿವರಾಮಪ್ಪ | 93 | ಖುಷ್ಕಿ | 94 | 92 | 101 | 90 | 4-24<br>0-02 (ಖ) | 25-00 |
| 10 | ರಾಜಶೇಖರಪ್ಪ ಬಿನ್ ಕರಿಯಪ್ಪ<br>ಕೆ.ವಿರೂಪಾಕ್ಷಪ್ಪ ಬಿನ್ ಕರಿಯಪ್ಪ<br>ಶಾರದಮ್ಮ ಕೋಂ ನಂಜುಂಡಪ್ಪ<br>ರವಿ ಬಿನ್ ನಂಜುಂಡಪ್ಪ<br>ಶೋಭಾ ಕೋಂ ನಂಜುಂಡಪ್ಪ<br>ಕೆ.ಶಿವಮೂರ್ತಿ ಬಿನ್ ಕರಿಯಪ್ಪ<br>ಶಾರದಮ್ಮ ಕೋಂ ಶಿವಮೂರ್ತಿ<br>ಎಸ್.ಮಂಜುಮಾಥ್ ಮೈಗಾ ತಂದೆ ಕೆ.ಶಿವಮೂರ್ತಿ | ರಾಜಶೇಖರಪ್ಪ ಬಿನ್ ಕರಿಯಪ್ಪ<br>ಕೆ.ವಿರೂಪಾಕ್ಷಪ್ಪ ಬಿನ್ ಕರಿಯಪ್ಪ<br>ಶಾರದಮ್ಮ ಕೋಂ ನಂಜುಂಡಪ್ಪ<br>ರವಿ ಬಿನ್ ನಂಜುಂಡಪ್ಪ<br>ಶೋಭಾ ಕೋಂ ನಂಜುಂಡಪ್ಪ<br>ಕೆ.ಶಿವಮೂರ್ತಿ ಬಿನ್ ಕರಿಯಪ್ಪ<br>ಶಾರದಮ್ಮ ಕೋಂ ಶಿವಮೂರ್ತಿ<br>ಎಸ್.ಮಂಜುಮಾಥ್ ಮೈಗಾ ತಂದೆ ಕೆ.ಶಿವಮೂರ್ತಿ | 101 | ತರಿ | 100 | 102, 103 | 105 | 93 | 18-28<br>0-05 (ಖ) | 92-17 |

| ಕ್ರಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ ಹಿಸ್ಸಾ ನಂ | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | | |
| **1** | **2** | **3** | **4** | **6** | **8** | **9** | **10** | **11** | **5** | **7** |
| 11 | ವೈ.ಎಸ್.ಸೂರ್ಯನಾರಾಯಣ ಜೋಯಿಸ್ ಬಿನ್ ಶಂಕರನಾರಾಯಣ ಜೋಯಿಸ್ | ವೈ.ಎಸ್.ಸೂರ್ಯನಾರಾಯಣ ಜೋಯಿಸ್ ಶಂಕರನಾರಾಯಣ ಜೋಯಿಸ್ | 102 | ಖುಷ್ಕಿ | 101 | ಸೋಮಿನಕೊಪ್ಪ ಗಡಿ | 103 | 92 | 9-03 | 13-00 |
| 12 | ಕೆ.ವಿರೂಪಾಕ್ಷಪ್ಪ ಬಿನ್ ಕರಿಬಸಪ್ಪ | ಕೆ.ವಿರೂಪಾಕ್ಷಪ್ಪ ಬಿನ್ ಕರಿಬಸಪ್ಪ | 105/1 | ತರಿ | 22 | 104 | 105/4 | 105/2 | 3-10<br>0-01(ಖ) | 2-00 |
| 13 | ಹೆಚ್.ಬಿ. ಬಸವರಾಜಪ್ಪ ಬಿನ್ ಹನುಮಂತಪ್ಪ | ಹೆಚ್.ಬಿ. ಬಸವರಾಜಪ್ಪ ಬಿನ್ ಹನುಮಂತಪ್ಪ | 105/2 | ತರಿ | 22 | 104 | 105/1 | 105/3 | 2-39<br>0-01 (ಖ) | 2-00 |
| 14 | ಬಿ.ಹೆಚ್. ಉಮಾಪತಿ ಬಿನ್ ಹನುಮಂತಪ್ಪ<br>ಬಿ.ಹೆಚ್.ಪಾಲಾಕ್ಷಪ್ಪ<br>ಸಂಜಯ್ ವಿ.ಮೋದಿ ಬಿನ್ ವೈಜಲಾಲ ಮೋದಿ<br>ಉಮಾಪತಿ ಬಿ.ಹೆಚ್ ಬಿನ್ ಹನುಮಂತಪ್ಪ | ಬಿ.ಹೆಚ್. ಉಮಾಪತಿ ಬಿನ್ ಹನುಮಂತಪ್ಪ<br>ಬಿ.ಹೆಚ್.ಪಾಲಾಕ್ಷಪ್ಪ<br>ಸಂಜಯ್ ವಿ.ಮೋದಿ ಬಿನ್ ವೈಜಲಾಲ ಮೋದಿ<br>ಉಮಾಪತಿ ಬಿ.ಹೆಚ್ ಬಿನ್ ಹನುಮಂತಪ್ಪ | 105/3 | ತರಿ | 23, 24 | 104 | 105/2 | 101 | 3-12<br>0-01(ಖ) | 2-00 |
| 15 | ಮಹೇಶಪ್ಪ ಬಿನ್ ಬಸಪ್ಪ<br>ಶಿವಕುಮಾರ್ ಬಿನ್ ಬಸಪ್ಪ<br>ಕೆ.ವಿರೂಪಾಕ್ಷಪ್ಪ ಬಿನ್ ಕರಿಬಸಪ್ಪ | ಮಹೇಶಪ್ಪ ಬಿನ್ ಬಸಪ್ಪ<br>ಶಿವಕುಮಾರ್ ಬಿನ್ ಬಸಪ್ಪ<br>ಕೆ.ವಿರೂಪಾಕ್ಷಪ್ಪ ಬಿನ್ ಕರಿಬಸಪ್ಪ | 105/4 | ಖುಷ್ಕಿ | 22 | 104 | 106 | 105/1 | 3-17<br>0-01(ಖ) | 2-44 |
| 16 | ಕೆ.ನಂಜುಂಡಪ್ಪ ಬಿನ್ ಕರಿಬಸಪ್ಪ | ಕೆ.ನಂಜುಂಡಪ್ಪ ಬಿನ್ ಕರಿಬಸಪ್ಪ | 106/1 | ಖುಷ್ಕಿ | 22 | 104 | 107 | 106/2 | 2-02 | 1-52 |
| 17 | ನಾಗೇಂದ್ರಪ್ಪ ಬಿನ್ ನಂದ್ಯಪ್ಪ | ನಾಗೇಂದ್ರಪ್ಪ ಬಿನ್ ನಂದ್ಯಪ್ಪ | 106/2 | ಖುಷ್ಕಿ | 22 | 104 | 106/1 | 105 | 2-03<br>0-01(ಖ) | 2-00 |

| ಕ್ರಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ ಹಿಸ್ಸಾ ನಂ | ತರಹೆ | ಚಕ್ಕುಬಂದಿ ಪೂರ್ವ ಸ.ನಂ | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| 1 | 2 | 3 | 4 | 6 | 8 | 9 | 10 | 11 | 5 | 7 |
| 18 | ವಿರೂಪಾಕ್ಷಪ್ಪ ಬಿನ್ ಕರಿಬಸಪ್ಪ<br>ನೂರ್ ಜಾನ್ ಕೋಂ ಅಬ್ದುಲ್ ಸಲಾಂ<br>ರುದ್ರಮ್ಮ ಕೋಂ ದುಂಡ್ಯಪ್ಪ<br>ನೂರ್ ಜಾನ್ ಕೋಂ ಅಬ್ದುಲ್ ಸಲಾಂ<br>ಪ್ರಮೀಳಾ ದೇವಿ ಬಿನ್ ಗೋವಿಂದಪ್ಪ | ವಿರೂಪಾಕ್ಷಪ್ಪ ಬಿನ್ ಕರಿಬಸಪ್ಪ<br>ನೂರ್ ಜಾನ್ ಕೋಂ ಅಬ್ದುಲ್ ಸಲಾಂ<br>ರುದ್ರಮ್ಮ ಕೋಂ ದುಂಡ್ಯಪ್ಪ<br>ನೂರ್ ಜಾನ್ ಕೋಂ ಅಬ್ದುಲ್ ಸಲಾಂ<br>ಪ್ರಮೀಳಾ ದೇವಿ ಬಿನ್ ಗೋವಿಂದಪ್ಪ | 107/P<br>107/P1<br>107/P2<br>107/P2<br>107/P3 | ಖುಷ್ಕಿ | 19, 20 | 108 | 110 | 106 | 15-28<br>0-04(ಖ) | 35-82 |
| 19 | ಖಲಂದರ್ ಖಾನ್ ಬಿನ್ ಹುಸ್ಯೈನ್ ಖಾನ್ | ಖಲಂದರ್ ಖಾನ್ ಬಿನ್ ಹುಸ್ಯೈನ್ ಖಾನ್ | 108/1 | ಖುಷ್ಕಿ | 108/2 | ಹೊಸೂರು ಗಡಿ | 109/1 | 104 | 3-00 | 5-00 |
| 20 | ಹೆಚ್.ಎಸ್.ಹಯಾತ್ ಖಾನ್ ಬಿನ್ ಹುಸ್ಯೈನ್ ಖಾನ್ | ಹೆಚ್.ಎಸ್.ಹಯಾತ್ ಖಾನ್ ಬಿನ್ ಹುಸ್ಯೈನ್ ಖಾನ್ | 108/2 | ತರಿ | 107 | 108/1 | 109/1,<br>109/2 | 104 | 3-37 | 5-00 |
| 21 | ಖಲಂದರ್ ಖಾನ್ ಬಿನ್ ಹುಸ್ಯೈನ್ ಖಾನ್ | ಖಲಂದರ್ ಖಾನ್ ಬಿನ್ ಹುಸ್ಯೈನ್ ಖಾನ್ | 109/1 | ತರಿ | 109/2 | ಹೊಸೂರು ಗಡಿ | ಹೊಸೂರು ಗಡಿ | 108/1, 108/2 | 1-20 | 6-00 |
| 22 | ಹೆಚ್.ಎಸ್.ಹಯಾತ್ ಖಾನ್ ಬಿನ್ ಹುಸ್ಯೈನ್ ಖಾನ್ | ಹೆಚ್.ಎಸ್.ಹಯಾತ್ ಖಾನ್ ಬಿನ್ ಹುಸ್ಯೈನ್ ಖಾನ್ | 109/2 | ತರಿ | 116 | 109/1 | ಹೊಸೂರು ಗಡಿ | 108/2 | 0-20 | 2-00 |
| 23 | ಎ.ಎಂ.ಶೋಬಾ ಬಿನ್ ಎ.ಎಂ.ಮಹೇಶ್ವರಯ್ಯ<br>ಎ.ಎಂ.ಶೋಬಾ ಬಿನ್ ಎ.ಎಂ.ಮಹೇಶ್ವರಯ್ಯ | ಎ.ಎಂ.ಶೋಬಾ ಬಿನ್ ಎ.ಎಂ.ಮಹೇಶ್ವರಯ್ಯ<br>ಎ.ಎಂ.ಶೋಬಾ ಬಿನ್ ಎ.ಎಂ.ಮಹೇಶ್ವರಯ್ಯ | 110/P1 | ಖುಷ್ಕಿ | 17 | 109 | 111 | 107 | 7-00<br>0-05(ಖ) | 14-00 |

| ಕ್ರಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ ಹಿಸ್ಸಾ ನಂ | ತರಹೆ | ಚಕ್ಕುಬಂದಿ ಪೂರ್ವ ಸ.ನಂ | ಪಶ್ಚಿಮ ಸ.ನಂ | ಉತ್ತರ ಸ.ನಂ | ದಕ್ಷಿಣ ಸ.ನಂ | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ. ಪೈ |
|---|---|---|---|---|---|---|---|---|---|---|
| 1 | 2 | 3 | 4 | 6 | 8 | 9 | 10 | 11 | 5 | 7 |
| 24 | ನಾರಾಯಣ ರೈ ಬಿನ್ ಕುಂಜಣ್ಣ ರೈ ಕೆ.ಪಿ.ಶ್ರೀನಿವಾಸ್ ಬಿನ್ ಕೆ.ಜಿ.ಪದ್ಮೋಜಿರಾವ್ ಕೆ.ಎಂ.ರಾಘವೇಂದ್ರ ಬಿನ್ ಮಂಜುನಾಥ, ಟಿ.ಎಸ್.ಜೈಜಗದೀಶ್ ಬಿನ್ ಟಿ.ಎಸ್. ಶ್ರೀನಿವಾಸ ಶೆಟ್ಟಿ | ನಾರಾಯಣ ರೈ ಬಿನ್ ಕುಂಜಣ್ಣ ರೈ ಕೆ.ಪಿ.ಶ್ರೀನಿವಾಸ್ ಬಿನ್ ಕೆ.ಜಿ.ಪದ್ಮೋಜಿರಾವ್ ಕೆ.ಎಂ.ರಾಘವೇಂದ್ರ ಬಿನ್ ಮಂಜುನಾಥ ಟಿ.ಎಸ್.ಜೈಜಗದೀಶ್ಬಿನ್ ಟಿ.ಎಸ್.ಶ್ರೀನಿವಾಸ ಶೆಟ್ಟಿ | 110/P2 | ತರಿ | 17 | 109 | 111 | 107 | 7-18 | 15-00 |

**ಘೋಷ್ವಾರೆ**

| ಗ್ರಾಮ: | ಖುಷ್ಕಿ ವಿಸ್ತೀರ್ಣ ಎ–ಗುಂ | ತರಿ ವಿಸ್ತೀರ್ಣ ಎ–ಗುಂ | ಖರಾಬು ವಿಸ್ತೀರ್ಣ ಎ–ಗುಂ | ಒಟ್ಟು ವಿಸ್ತೀರ್ಣ ಎ–ಗುಂ |
|---|---|---|---|---|
| ಬಸವನಗಂಗೂರು. | 70-22 | 45-18 | 0-24 | 116-24 |
| ಸೋಮಿನಕೊಪ್ಪ | 24-39 | 9-34 | 1-37 | 36-30 |
| ಒಟ್ಟು | | | | 153-14 |

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

ಪಿಡಿ–84

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಛೇರಿ, ವಿಜಾಪುರ**

**ಪ್ರಕಟಣೆ**

**ಸಂಖ್ಯೆ: ಜಿಸಕ/ಲೆಕ್ಕ/ಸಿಆರ್/2011–12, ದಿನಾಂಕ:14.06.2011**

ಸಮಾಜ ಕಲ್ಯಾಣ ಇಲಾಖೆಯಿಂದ ಸನ್ 2011–12ನೇ ಸಾಲಿಗಾಗಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಬಿಜಾಪುರ ಜಿಲ್ಲೆಯಲ್ಲಿ ವಾಸವಾಗಿರುವ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗದ ಕಾನೂನು ಪದವೀಧರರು ಈ ಕೆಳಕಂಡ ಅರ್ಹತೆ ಮತ್ತು ದಾಖಲೆಗಳನ್ನು ಹೊಂದಿದವರು ದಿನಾಂಕ:15.07.2011 ರೊಳಗಾಗಿ ಅರ್ಜಿ ಸಲ್ಲಿಸಲು ತಿಳಿಸಲಾಗಿದೆ.

1) ಈ ಯೋಜನೆಯಡಿ ಅರ್ಜಿದಾರರು ಪರಿಶಿಷ್ಟಜಾತಿ ಹಾಗೂ ಪರಿಶಿಷ್ಠ ವರ್ಗದ ಜಾತಿಗೆ ಸೇರಿದವರಾಗಿರಬೇಕು. (ದೃಢೀಕೃತ ಜಾತಿ ಪ್ರಮಾಣ ಪತ್ರ ಲಗತ್ತಿಸಬೇಕು) ಹಾಗೂ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ ಎರಡು ವರ್ಷದಿಂದ ಇತ್ತೀಚೆಗೆ ಕಾನೂನು ಪದವಿಯಲ್ಲಿ ಉತ್ತೀರ್ಣರಾಗಿರಬೇಕು. ಅಂದರೆ ದಿನಾಂಕ:15.07.2009 ರಿಂದ 15.07.2011 ರಲ್ಲಿ ಅಂತಿಮ ಪದವಿ ಪಾಸಾಗಿರಬೇಕು.

2) ವಕೀಲ ವೃತ್ತಿಯನ್ನು ನಡೆಸಲು ಅರ್ಹತೆ ಪಡೆದಿರುವ ಕಾನೂನು ಪದವೀಧರರು ಮಾತ್ರ ಅರ್ಜಿ ಸಲ್ಲಿಸತಕ್ಕದ್ದು.

3) ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದಂದು ಅಭ್ಯರ್ಥಿಗಳ ವಯಸ್ಸು 18 ರಿಂದಾ 35 ವರ್ಷದೊಳಗಿರಬೇಕು.

4) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ತರಬೇತಿ ಮಧ್ಯದಲ್ಲಿ ಬಿಟ್ಟು ಹೋಗಬಾರದು. ಒಂದು ವೇಳೆ ಬಿಟ್ಟು ಹೋದಲ್ಲಿ ಶಿಷ್ಯವೇತನ ಮೊತ್ತವನ್ನು ಕಂದಾಯ ಬಾಕಿ ಅಂತಾ ವಸೂಲಿ ಮಾಡಲಾಗುವುದು.

5) ತರಬೇತಿಯ ಅವಧಿ ನಾಲ್ಕು ವರ್ಷ ಆಗಿದ್ದು ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಪ್ರತಿ ತಿಂಗಳು ರೂ.1000–00 ರಂತೆ ಸ್ಟೈಫಂಡ್ ನೀಡಲಾಗುವುದು.

6) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್/ ಸರ್ಕಾರಿ ವಕೀಲರು ಅಥವಾ 20 ವರ್ಷಕ್ಕೂ ಮೇಲ್ಪಟ್ಟು ವಕೀಲ ವೃತ್ತಿ ನಡೆಸಿದ ಖಾಸಗಿ ವಕೀಲರುಗಳ ಹತ್ತಿರ ತರಬೇತಿಗೆ ನಿಯೋಜಿಸಲಾಗುವುದು.

ಅರ್ಹ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಈ ಕೆಳಕಂಡ ದಾಖಲೆಗಳೊಂದಿಗೆ ದಿನಾಂಕ:15.07.2011ರ ಒಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ವಿಜಾಪುರ ಇವರಿಗೆ ಅರ್ಜಿ ಸಲ್ಲಿಸತಕ್ಕದ್ದು.

1. ಜಾತಿ ಪ್ರಮಾಣ ಪತ್ರ ಹಾಗೂ ಆದಾಯ ಪ್ರಮಾಣ ಪತ್ರ.
2. ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಹಾಗೂ ಲಿವ್ವಿಂಗ್ ಸ್ಕೂಲ್ ಸರ್ಟಿಫಿಕೇಟ್
3. ಬಾರ್ ಅಸೋಸಿಯೇಶನ್ ಸದಸ್ಯತ್ವ ಪ್ರಮಾಣ ಪತ್ರ.
4. ಅಂತಿಮ ಕಾನೂನು ಪಾಸ್ ಮಾಡಿದ ಅಂಕಪಟ್ಟಿ ಹಾಗೂ ಮುಂತಾದ ಶೈಕ್ಷಣಿಕ ಅರ್ಹತೆ ಪಡೆದ ಅಂಕಪಟ್ಟಿ.

ಅರ್ಜಿ ನಮೂನೆ ಹಾಗೂ ಅಗತ್ಯ ದಾಖಲೆಗಳಿಗೆ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಣ ಪ್ರಮಾಣ ಪತ್ರಗಳೊಂದಿಗೆ ಅರ್ಜಿ ಸಲ್ಲಿಸತಕ್ಕದ್ದು ಮತ್ತು ಇತರೆ ಹೆಚ್ಚಿನ ವಿವರಗಳಿಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಾರ್ಯಾಲಯ ಮನಗೂಳಿ ರೋಡ್, ಬಾಲಭವನ ಹತ್ತಿರ, ವಿಜಾಪುರ ಇಲ್ಲಿ ಸಂಪರ್ಕಿಸಬಹುದಾಗಿದೆ.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು,
ಬಿಜಾಪುರ.

ಪಿ.ಆರ್.629

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ:ವಿವ: 02/2010–11, ದಿನಾಂಕ:05–03–2011**

| | | |
|---|---|---|
| ಉಪಸ್ಥಿತರು | : | ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಣ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| ಪಿರ್ಯಾಧಿದಾರರು | : | ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| ಆರೋಪಿಗಳು | : | ಈಸೂಬ್ ಸಾಬ್ |
| ಬಾಧ್ಯತೆದಾರರು | : | ಯಾರು ಮುಂದೆ ಬಂದಿರುವುದಿಲ್ಲ |

**ಪ್ರಸ್ತಾವನೆ:**

ದಿ:05–04–2010 ರಂದು ಶಿರಾಳಕೊಪ್ಪ ವಲಯದ ಕಸಬಾ ಶಾಖೆ ವನಪಾಲಕ ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕು ಅರೆಕೊಪ್ಪ ಕ್ರಾಸ್‌ನಲ್ಲಿ ಕಾಯುತ್ತಿರುವಾಗ ಒಂದು ವಾಹನ ಮಾರುತಿ ವ್ಯಾನ್ ಸಿಕೆಡಿ–725ನ್ನು ನಿಲ್ಲಿಸಲು, ಸೂಚಿಸಿದಾಗ ನಿಲ್ಲಿಸದೆ ವೇಗವಾಗಿ ಮುಂದೆ ಹೋದಾಗ ಅದನ್ನು ಇಲಾಖೆಯವರು ಮೋಟಾರ್ ಬೈಕ್‌ನಲ್ಲಿ ಬೆನ್ನಟ್ಟಿದಾಗ ಮಾರುತಿ ವ್ಯಾನ್ ಶಿಕಾರಿಪುರ ತಾಲ್ಲೂಕು ಕ್ಯಾದಿಗೆಕೊಪ್ಪ ಗ್ರಾಮದ ಈಸೂಬ್ ಸಾಬ್ ಬಿನ್ ರಶೀದ್ ಸಾಬ್, ಇವರ ಮನೆ ಹತ್ತಿರ ಹಿತ್ತಲಿನಲ್ಲಿ ನಿಲ್ಲಿಸಿ, ಚಾಲಕನು ಪಕ್ಕದ ಅಡಿಕೆ ತೋಟದಲ್ಲಿ ಓಡಿ ಪರಾರಿಯಾದನು. ಓಡಿ ಹೋದವನು ಈಸೂಬ್ ಸಾಬ್ ಬಿನ್ ರಶೀದ್ ಸಾಬ್ ಎಂದು ಗುರುತಿಸಲಾಗಿದೆ. ನಂತರ ವಾಹನವನ್ನು ಪರಿಶೀಲಿಸಿ ನೋಡಲಾಗಿ ಬಿಳಿಬಣ್ಣದ ಮಾರುತಿ ವ್ಯಾನ್ ಸಿಕೆಡಿ–725 (ಛಾಸ್ಸಿಸ್ ನಂಬರ್ ಮತ್ತು ಇಂಜಿನ್ ನಂಬರ್ ಕಂಡುಬಂದಿರುವುದಿಲ್ಲ) ಆಗಿದ್ದು, ವಾಹನದೊಳಗಡೆ ಬೀಟೆ ಜಾತಿಯ 04=1.595 ಎಂ3

ತುಂಡುಗಳಿದ್ದ, ತುದಿ ಬುಡದಲ್ಲಿ ಗರಗಸದಿಂದ ಕೊಯ್ತು ಮಾಡಿದ್ದು, ಸಿಪ್ಪೆ ಸಮೇತಯಿದ್ದು, ಈ ತುಂಡುಗಳಿಗೆ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಬೀಟೆ ನಾಟಾವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿ, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪ ನಿಯಮ 144, 163, 165ರ ಪ್ರಕಾರ ಶಿರಾಳಕೊಪ್ಪ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:02/10–11ನ್ನು ದಾಖಲಿಸಿ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ನಂತರ ಈ ಪ್ರಕರಣದಲ್ಲಿ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ, ಇವರು ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ, ಆರೋಪಿಗಳ ವಿರುದ್ಧ ನ್ಯಾಯಾಲಯಕ್ಕೆ ದೋಷರೋಪಣಾ ಪಟ್ಟಿ ಸಲ್ಲಿಸಲು ಅನುಮತಿಯನ್ನು ಮತ್ತು ವಾಹನ, ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್ ಈ ನ್ಯಾಯಾಲಯಕ್ಕೆ ಒದಗಿಸಲು ಸಹಾಯಕ ಪ್ರಾದೇಶಿಕ ಸಾರಿಗೆ, ಅಧಿಕಾರಿ ರಾಜಾಜಿನನಗರ, ಬೆಂಗಳೂರು ಇವರಿಗೆ ಈ ನ್ಯಾಯಾಲಯದ ಪತ್ರ ಸಂ:ಬಿ3.ಅಮೊ.ವಾಹನ.ಸಿಆರ್.02/10–11ನ್ನು ದಿ:01–07–2010, 01–10–2010 ರಂದು ಬರೆದು ಕೋರಲಾಯಿತು. ಆದರೆ, ಸಾರಿಗೆ ಅಧಿಕಾರಿಯು ಈ ವಾಹನದ ಬಿ ಎಕ್ಸ್‌ಟ್ರಾಕ್ಸ್‌ನ್ನು ಇಲ್ಲಿಯವರೆಗೆ ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ:ಬಿ3:ಅಮೊ: ವಾಹನ:ಸಿಆರ್:19/10–11/ದಿ:01–07–2010ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:17–07–2010ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:19–08–2010ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:26–02–2011ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ, ಇವರು ವಾಹನವನ್ನು ಜಪ್ತುಮಾಡಿ ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ತುಂಡುಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ, ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಸಿಕೆಡಿ–725 ಮತ್ತು ಈ ವಾಹನದಲ್ಲಿದ್ದ, ಬೀಟೆ ನಾಟಾ 04=1.595ಎಂ3ವು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:05–03–2011 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ

ಪಿ.ಆರ್.636 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ:ವಿವ: 03/2010–11, ದಿನಾಂಕ:05–03–2011**

| | | |
|---|---|---|
| ಉಪಸ್ಥಿತರು | : | ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| ಪಿರ್ಯಾಧಿದಾರರು | : | ವಲಯ ಅರಣ್ಯಾಧಿಕಾರಿ,<br>ಶಿಕಾರಿಪುರ ವಲಯ (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| ಆರೋಪಿಗಳು | : | ಪತ್ತೆಯಾಗಿರುವುದಿಲ್ಲ |
| ಬಾಧ್ಯತೆದಾರರು | : | ಯಾರು ಮುಂದೆ ಬಂದಿರುವುದಿಲ್ಲ |

ಪ್ರಸ್ತಾವನೆ:–

ದಿ:16–04–2010 ರಂದು ಶಿಕಾರಿಪುರ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬೆಳಿಗ್ಗೆ 2–00 ಗಂಟೆಗೆ ಬಂದ ವರ್ತಮಾನದ ಮೇರೆಗೆ ಇಲಾಖಾ ಜೀಪಿನಲ್ಲಿ ಗಾಮಕ್ರಾಸ್‌ಗೆ ಹೋಗಿ ಕಾಯುತ್ತಿರುವಾಗ ಬೆಳಿಗ್ಗೆ 5–00 ಗಂಟೆಗೆ ಒಂದು ವಾಹನ ಸಾಗರ ಕಡೆಯಿಂದ ಶಿಕಾರಿಪುರ ಕಡೆಗೆ ವೇಗವಾಗಿ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದರು. ನಿಲ್ಲಿಸದೇ ವೇಗವಾಗಿ ಮುಂದೆ ಸಾಗಿದಾಗ ಅದು ಸುಮಾರು 150 ಅಡಿ ದೂರ ಚಲಿಸಿ ಪಕ್ಕದ ಚರಂಡಿಯಲ್ಲಿ ಬಿದ್ದು ವಾಲಿಕೊಂಡಿತು. ವಾಹನದಲ್ಲಿದ್ದ 2 ಜನ ಆಸಾಮಿಗಳು ವಾಹನದಿಂದ ಇಳಿದು ಕತ್ತಲಲ್ಲಿ ಓಡಿ ಪರಾರಿಯಾದರು. ತಕ್ಷಣ ಬೆನ್ನಟ್ಟಿದರು ಕೈಗೆ ಸಿಗಲಿಲ್ಲ. ನಂತರ ವಾಹನ ಪರಿಶೀಲಿಸಲಾಗಿ ವಾಹನದ ಮುಂಭಾಗದ ಗಾಜು ಒಡೆದು ಹೋಗಿದ್ದು, ವಾಹನ ಟಾಟಾ ಸುಮೋ ಕೆಎ–17–ಎನ್–6910 ಆಗಿದ್ದು, ವಾಹನದೊಳಗಡೆ ಹಸಿಯಾದ ಸಿಪ್ಪೆ ಸಹಿತ 5 ಬೀಟೆ ತುಂಡಿದ್ದು, ಈ ತುಂಡು 0.708 ಎಂ3 ಪ್ರಮಾಣವಿದ್ದು, ಸದರಿ ತುಂಡುಗಳನ್ನು ಗರಗಸದಿಂದ ಕೊಯ್ತ ಮಾಡಿದಾಗಿದ್ದು, ಹಾಗೂ ಈ ತುಂಡುಗಳಿಗೆ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಬೀಟೆ ನಾಟಾವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿ, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104 (ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪ ನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:02/10–11ನ್ನು ದಾಖಲಿಸಿ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ಈ ಪ್ರಕರಣದಲ್ಲಿ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಇವರು ವಿಚಾರಣಾ ವರದಿ ಸಲ್ಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ನಂತರ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್ ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದ ಪತ್ರ ಸಂ:ಬಿ3.ಅಮೊ.ವಾಹನ. ವಿವ.03/2010–11 ದಿ:21–04–2010ರಂದು ಸಾರಿಗೆ ಅಧಿಕಾರಿ, ದಾವಣಗೆರೆ ಇವರಿಗೆ ಪತ್ರ ಬರೆದು ಕೋರಿದಂತೆ, ಸಾರಿಗೆ ಅಧಿಕಾರಿ, ದಾವಣಗೆರೆ ಇವರ ಪತ್ರ ಸಂ:ಪ್ರಾಸಾಅ.ದಾವ.ಸಾರಿಗೇತರ.2010–11 ದಿ:15–05–2010ರ ಪತ್ರದಲ್ಲಿ ಈ ವಾಹನ ದಾವಣಗೆರೆ ಸಾರಿಗೆ ಕಛೇರಿಯಲ್ಲಿ ನೊಂದವಾಣಿಯಾಗಿಲ್ಲವೆಂದು ತಿಳಿಸಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ:ಬಿ3:ಅಮೊ:ವಾಹನ:ಸಿಆರ್:19/10–11/ದಿ:01–07–2010ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:17–07–2010ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:19–08–2010ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:26–02–2011 ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಇವರು ವಾಹನವನ್ನು ಜಪ್ತುಮಾಡಿ ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ತುಂಡುಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಇವರು ಜಪ್ತು ಮಾಡಿದ ವಾಹನ ಟಾಟಾ ಸುಮೋ ನಂ: ಕೆಎ–17–ಎನ್–6910 (ಛಾಸ್ಸಿಸ್ ನಂ:385003080911618 ಇಂಜಿನ್ ನಂ:254701153815)ನ್ನು ಮತ್ತು ಈ ವಾಹನದಲ್ಲಿದ್ದ, ಒಟ್ಟು ಬೀಟೆ ನಾಟಾ 05=0.708 ಎಂ3ವು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:05–03–2011 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

ಪಿ.ಆರ್.635

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಕ್ರ:ಬಿ3:ಅಮೊ:ವಾಹನ–04/07–08, ದಿನಾಂಕ: 05–02–2011**

| | | |
|---|---|---|
| ಉಪಸ್ಥಿತರು | : | ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಣ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| ಫಿರ್ಯಾಧಿದಾರರು | : | ವಲಯ ಅರಣ್ಯಾಧಿಕಾರಿ,<br>ಸಾಗರ ವಲಯ, ಸಾಗರ. (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| ಭಾದ್ಯತೆದಾರರು | : | ಶ್ರೀ ಎನ್.ಬಿ.ರುದ್ರೇಶ್ ಬಿನ್ ಬಸರಾಜಪ್ಪ, ನಿಟ್ಟುವಳ್ಳಿ ರಸ್ತೆ, ಕೆ.ಟಿ.ಜಿ. ನಗರ, 16ನೇ ತಿರುವು, 1ನೇ ಮೈನ್, ಮನೆ ನಂ.138/3, ದಾವಣಗೆರೆ.<br>(ಶ್ರೀ ಇ.ನಾಗರಾಜ, ವಕೀಲರು, ಸಾಗರ) |

**ಪ್ರಸ್ತಾವನೆ:–**

ದಿ: 11–06–2007ರಂದು ಸಾಗರ ವಲಯದ ತ್ಯಾಗರ್ತಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾಲ್ಲೂಕು ಕಸಬಾ ಹೋಬಳಿ ಮುಳ್ಳುಕೆರೆ ಗ್ರಾಮದ ಬಸ್ ತಂಗುದಾಣದ ಹತ್ತಿರ ಕಾಯುತ್ತಿರುವಾಗ ರಾತ್ರಿ ಸುಮಾರು 11–00 ಗಂಟೆ ಸಮಯದಲ್ಲಿ ಒಂದು ವಾಹನ ಕ್ಯಾಂಟರ್ ಕೆಎ–17–ಎ–2887 ಬರುತ್ತಿರುವುದನ್ನು ಬ್ಯಾಟರಿ ಬಿಟ್ಟು ನಿಲ್ಲಿಸಿ ಪರಿಶೀಲಿಸಿದಾಗ, ವಾಹನದ ಒಳಗೆ ಬೀಟೆ 02=0.080ಎಂ3 ಇದ್ದು, ಈ ಬೀಟೆ ಸೈಜ್ ಸಾಗಾಣಿಕೆಗೆ ರಹದಾರಿ ಇಲ್ಲವೆಂದು ಚಾಲಕ ಚನ್ನಬಸಪ್ಪ ಬಿನ್ ಬಸವಣ್ಣಪ್ಪ, 49 ವರ್ಷ, ಪಂಪ್ ಹೌಸ್, ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕು ಎಂದು ತಿಳಿಸಿದ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ, ಬೀಟೆ ಸೈಜ್ ಮತ್ತು ಅಸಾಮಿಯನ್ನು ಜಪ್ತು ವರದಿ, ಪ್ರಥಮ ವರ್ತಮಾನ ವರದಿ ಮತ್ತು ಮಹಜರ್ ಕ್ರಮದೊಂದಿಗೆ ಇಲಾಖಾ ಪರ ಜಪ್ತಿಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 62, 104ಎ, 24, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಅರಣ್ಯ ಮೊಕದ್ದಮೆ ಸಂಖ್ಯೆ: 21/07–08ನ್ನು ದಾಖಲಿಸಿ ಅಸಾಮಿಯನ್ನು ನ್ಯಾಯಾಲಯಕ್ಕೆ ಒಪ್ಪಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಸದರಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ನಂತರ ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಈ ವಾಹನದ 'ಬಿ' ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ದಾವಣಗೆರೆ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ:ಬಿ3:ಅಮೊ:ವಾಹನ:44/07–08 ದಿ:15–06–2007ರಲ್ಲಿ ಬರೆದು ಕೋರಲಾಗಿತ್ತು. ಅದರಂತೆ ಸದರಿ ಪ್ರಾದೇಶಿಕ ಅಧಿಕಾರಿ ಪತ್ರ ಸಂಖ್ಯೆ:ಪ್ರಾಸಾಅ:ದಾವನೋ:ವಿಭಾಗ–1/07–08 ದಿ:20–06–2007ರ ಪತ್ರದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಬಿ ಪ್ರತಿಯಂತೆ ಶ್ರೀ ಆರ್.ಬಿ. ರುದ್ರೇಶ ಬಿನ್ ಬಸವರಾಜಪ್ಪ, 16ನೇ ಕ್ರಾಸ್, 1ನೇ ಮೈನ್, ಡೋರ್ ನಂ: 138/3, ನಿಟ್ಟುವಳ್ಳಿ ರಸ್ತೆ, ಕೆ.ಟಿ.ಜೆ. ನಗರ, ದಾವಣಗೆರೆ ಇವರಿಗೆ 30 ದಿನಗಳ ಕಾಲಾವಕಾಶ ನೀಡಿ ದಿ:23–08–2007ರಂದು ಕಾರಣ ಕೇಳಿ ಪತ್ರ ಜಾರಿ ಮಾಡಿ, ವಾಹನದ ದಾಖಲೆ ಸಲ್ಲಿಸದೇ ಹೋದಲ್ಲಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ತಿಳಿಸಿದೆ. 30 ದಿನಗಳು ಕಳೆದರೂ ಯಾರೂ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ. ಇದರಿಂದ ಈ ವಾಹನವನ್ನು ಮತ್ತು ಅರಣ್ಯ ಉತ್ಪನ್ನವನ್ನು ದಿ:06–10–2009 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಯಿತು. ಈ ಆದೇಶದ ಮೇಲೆ ಆರ್.ಸಿ. ಮಾಲೀಕರು ಹೆಚ್ಚುವರಿ ಸತ್ರ ನ್ಯಾಯಾಲಯ, ಶಿವಮೊಗ್ಗ ಇಲ್ಲಿ ಮೇಲ್ಮನವಿಯನ್ನು ಕ್ರಿ.ಮಿ.ಅ.ನಂ.22/2007ರಲ್ಲಿ ಸಲ್ಲಿಸಿದ್ದು, ಈ ಅಪೀಲ್‌ನ ದಿ:28–01–2008 ರಂದು ಈ ನ್ಯಾಯಾಲಯದಲ್ಲಿ ಪುನ: ವಿಚಾರಣೆಗೆ ಅವಕಾಶ ಮಾಡುವಂತೆ ಆದೇಶ ಹೊರಡಿಸಿದೆ. ಈ ಆದೇಶದಂತೆ ವಾಹನದ ಮಾಲೀಕರು ವಕೀಲರ ಮುಖಾಂತರ ದಿ:15–03–2008 ರಂದು ಕ್ಲೇಮು ಅರ್ಜಿ ಸಲ್ಲಿಸಿರುತ್ತಾರೆ. ಇವರ ಅರ್ಜಿಯನ್ನು ಪುರಸ್ಕರಿಸಿ 6 ಷರತ್ತುಗಳನ್ನು ವಿಧಿಸಿ, ಖಾಲಿ ವಾಹನ ಮಧ್ಯಂತರ ಅವಧಿಗೆ ಆರ್.ಸಿ. ಮಾಲೀಕರಿಗೆ ಬಿಟ್ಟುಕೊಡಲುಬಿ3.ಅಮೊ.ವಾಹನ.04/07–08/ದಿ:29–03–2008 ರಂದು ಆದೇಶವಾಗಿದೆ. ಆದರೆ ವಾಹನ ಮಾಲೀಕ ಈ ಆದೇಶದಂತೆ ಷರತ್ತುಗಳನ್ನು ಪಾಲಿಸಿರುವುದಿಲ್ಲ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ನೀಲಕಂಠಪ್ಪ, ವನಪಾಲಕ, ಇವರನ್ನು ದಿ:20–12–2008 ರಂದು ಕರೆಸಿ ಸತ್ಯ ಪ್ರತಿಜ್ಞೆ ಬೋಧಿಸಿ ಸಹಾಯಕ ಸರ್ಕಾರಿ ಅಭಿಯೋಜಕರಿಂದ ಮುಖ್ಯ ವಿಚಾರಣೆ 'ನಾನು ಕಳೆದ 5 ವರ್ಷಗಳಿಂದ ಸಾಗರ ವಲಯದ ತ್ಯಾಗರ್ತಿ ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:11–06–2007ರಂದು ಸಂಜೆ 6–00 ಗಂಟೆಗೆ ವಲಯ ಅರಣ್ಯಾಧಿಕಾರಿಗಳಿಗೆ ಬಂದ ಖಚಿತ ವರ್ತಮಾನದಂತೆ ಅವರು ನಮಗೆ ಸ್ಥಳಕ್ಕೆ ಹೋಗಿ ಪರಿಶೀಲಿಸಲು ಹೇಳಿದ್ದು, ನಾನು ನನ್ನ ಸಿಬ್ಬಂದಿಗಳಾದ ಮಂಜುನಾಥ, ಚೆನ್ನಳ್ಳಿ, ಶ್ರೀಧರ ಅವಧಾನಿ ಮತ್ತು ಮಲ್ಲೇಶಪ್ಪ ಅವರೊಂದಿಗೆ ಮುಳ್ಳುಕೆರೆ ಬಸ್ ಸ್ಟಾಂಡ್ ಬಳಿ ಕಾಯುತ್ತಿರುವಾಗ ರಾತ್ರಿ ಸು.11–00 ಗಂಟೆ ಸಮಯಕ್ಕೆ ಒಂದು ಐಶರ್ ವಾಹನ ಕೆಎ–17–ಎ–2887 ತ್ಯಾಗರ್ತಿ ಕಡೆಯಿಂದ ಶಿರಾಳಕೊಪ್ಪದ ಕಡೆಗೆ ಬರುತ್ತಿದ್ದು, ಅದನ್ನು ತಡೆದು ನಿಲ್ಲಿಸಿದಾಗ ಅದರಲ್ಲಿ ಚಾಲಕನಿದ್ದು, ಅವನ ಹೆಸರು ಚನ್ನಬಸಪ್ಪ ಎಂದು ವಿಚಾರಣೆ ಮಾಡಿದಾಗ ತಿಳಿದುಬಂದಿತು. ವಾಹನದ ಬಾಡಿಯಲ್ಲಿ ಒರಟು ಕೆತ್ತನೆ ಮಾಡಿದ 2 ಬೀಟೆ ಸೈಜುಗಳಿದ್ದು, ಅವುಗಳನ್ನು ಪರಿಶೀಲಿಸಿದಾಗ ಅವುಗಳ ಮೇಲೆ ಯಾವುದೇ ಇಲಾಖಾ ಛಾಪಾ ನಂಬರ್ ಕೊಟ್ಟು ಇಲಾಖಾ ಛಾಪಾ ಕೆಎನ್‌ಎಫ್‌ಡಿ ಜಿ–90ಇಇ ಹೊಡೆದು ಮಹಜರ್ ಅಡಿಯಲ್ಲಿ ತುಂಡುಗಳನ್ನು ಮತ್ತು ವಾಹನವನ್ನು ಅಮಾನತ್ತುಪಡಿಸಿಕೊಂಡೆವು. ಆಗ ಮಾಡಿದ ಮಹಜರ್‌ನ್ನು ಈಗ ನೋಡಿದ್ದು, ಅದನ್ನು ನಿಶಾನೆ ಪಿ–1 ಎಂದು, ನನ್ನ ಸಹಿಯನ್ನು ಪಿ1–ಎ ದಂದು ಗುರ್ತಿಸಿದೆ. ಪ್ರಕರಣವನ್ನು ನಾನೇ ದಾಖಲಿಸಿದ್ದು, ಪ್ರಥಮ ವರ್ತಮಾನ ವರದಿಯನ್ನು ನೋಡಿದ್ದು, ಅದನ್ನು ನಿಶಾನೆ ಪಿ–2 ಎಂದು, ನನ್ನ ಸಹಿಯನ್ನು ಪಿ2–ಎ ಎಂದು ಗುರ್ತಿಸಿದೆ. ಆರೋಪಿ, ವಾಹನ ಹಾಗೂ ತುಂಡುಗಳೊಂದಿಗೆ ಕಛೇರಿಗೆ ವಾಪಾಸ್ಸಾದೆವು. ಅಮಾನತ್ತು ಪಡಿಸಿಕೊಂಡ

ತುಂಡು, ವಾಹನದ ಬಗ್ಗೆ ಜಪ್ತು ವರದಿಯನ್ನು ನಾನೇ ತಯಾರಿಸಿದ್ದು, ಅದನ್ನು ನಿಶಾನೆ ಪಿ–3 ಎಂದು, ನನ್ನ ಸಹಿಯನ್ನು ಪಿ3–ಎ ಎಂದು ಗುರ್ತಿಸಿದೆ. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಆದೇಶದ ಮೇರೆಗೆ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯಕ್ಕೆ ಸಾಗಿಸಲಾಯಿತು. ಸದರಿ ವಾಹನವನ್ನು ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿಕೊಳ್ಳುತ್ತೇನೆ. ದಿ:31–10–2009 ರಂದು ಸಾಕ್ಷಿಯನ್ನು ಪುನ: ಕರೆಸಿ ಸತ್ಯಪ್ರತಿಜ್ಞೆಯನ್ನು ಬೋಧಿಸಲಾಯಿತು. ಪಾಟಿ ಸವಾಲು ಶ್ರೀ ಇ.ಎನ್.ವಕೀಲರಿಂದ ದಿ:11–06–2007ರಂದು ವಲಯ ಅರಣ್ಯಾಧಿಕಾರಿಗಳು ನಡೆಸಿದ ಸಭೆಯ ಸಂದರ್ಭದಲ್ಲಿ ಮಾಹಿತಿ ದೊರೆತ ಕಾರಣ ಸಭೆ ರದ್ದುಗೊಳಿಸಿ ನಮ್ಮನ್ನು ಸ್ಥಳಕ್ಕೆ ಕಳುಹಿಸಿದರು. ನಾವು ಸಾಯಂಕಾಲ 7–00 ಗಂಟೆಗೆ ಮುಳ್ಳುಕೆರೆ ಬಸ್‌ಸ್ಟಾಂಡ್ ಹತ್ತಿರ ಹೋದೆವು. ಅದು ತ್ಯಾಗರ್ತಿಗೆ ಹೋಗುವ ಮುಖ್ಯ ರಸ್ತೆಯಾಗಿರುತ್ತದೆ. ಬಸ್ ನಿಲ್ದಾಣದ ಬಳಿ ಸುತ್ತ ಮುತ್ತ ಯಾವುದೇ ಮನೆಗಳಿಲ್ಲ. ನಾವು ಆ ದಿನ ಯಾವುದೇ ವಾಹನ ತಪಾಸಣೆ ಮಾಡಿರುವುದಿಲ್ಲ. ನಮಗೆ ಖಚಿತವಾಗಿ ಇಂತಹುದೇ ವಾಹನದಲ್ಲಿ ಮಾಲು ಬರುತ್ತಿದೆ ಎಂಬ ಮಾಹಿತಿ ಇತ್ತು. ಬೀಟೆ ಮಾಲು ಬರುತ್ತಿದೆ ಎಂಬ ಮಾಹಿತಿ ಇತ್ತು. ನಾವು ಕಾಯುತ್ತಿರುವಾಗ ಇತರೆ ವಾಹನಗಳು ಹಾದು ಹೋಗಿರುತ್ತವೆ. ನಾವು ಬ್ಯಾಟರಿ ಮೂಲಕ ಸೂಚನೆ ಕೊಟ್ಟ ಕೂಡಲೇ ವಾಹನವನ್ನು ನಿಲ್ಲಿಸಿದರು. ವಾಹನದಲ್ಲಿ ಡ್ರೈವರ್ ಮಾತ್ರ ಇದ್ದನು. ಅವನ ಹೆಸರು ಚನ್ನಬಸಪ್ಪ. ವಾಹನದಲ್ಲಿ ಮಾಲೀಕರು ಇರಲಿಲ್ಲ. ಡ್ರೈವರ್‌ನನ್ನು ವಾಹನದ ಮಾಲೀಕರ ಬಗ್ಗೆ ವಿಚಾರಿಸಲಿಲ್ಲ. ತಪಾಸಣೆ ಮಾಡಿದಾಗ ವಾಹನದಲ್ಲಿ ಬಾಡಿಯಲ್ಲಿ ಎರಡು ಬೀಟೆ ಸೈಜುಗಳು ಇದ್ದವು. ಬೇರೆ ಯಾವುದೇ ಲಗೇಜ್ ಇರಲಿಲ್ಲ. ಡ್ರೈವರ್‌ನನ್ನು ಸದರಿ ಬೀಟೆ ಸೈಜುಗಳು ಯಾರಿಗೆ ಸಂಬಂಧಪಟ್ಟಿದ್ದು ಎಂದು ಕೇಳಲಿಲ್ಲ. ನಾವು ಡ್ರೈವರ್‌ನನ್ನು ಬಂಧಿಸಿದೆವು. ವಾಹನ ನಿಲ್ಲಿಸಿ ಮಹಜರನ್ನು ನಾನೇ ಮಾಡಿರುತ್ತೇನೆ. ಸದರಿ ಕ್ಯಾಂಟರ್ ವಾಹನವು 6 ಟನ್ ತೂಕದ ಮಾಲನ್ನು ಹೊರುವ ವಾಹನವಾಗಿರುತ್ತದೆ ಎಂದು ಒಪ್ಪುತ್ತೇನೆ. ಮತ್ತು ಅದು ಹಳದಿ ನಂಬರ್ ಪ್ಲೇಟ್‌ವುಳ್ಳ ಬಾಡಿಗೆ ವಾಹನವಾಗಿರುತ್ತದೆ. ಈ ವಾಹನ ನಿಲ್ಲಿಸಿ ಮಹಜರ್ ಪ್ರಕ್ರಿಯೆ ಮುಗಿಯಲು 12–30 ಗಂಟೆಯಾಗಿರುತ್ತದೆ. ಜಪ್ತು ಮಾಡಲಾದ ಬೀಟೆ ಸೈಜುಗಳ ಮೇಲೆ ಸೀಜಿಂಗ್ ಹ್ಯಾಮರ್ ಹೊಡೆಯಲಾಗಿರುತ್ತದೆ. ಹ್ಯಾಮರ್‌ನ ಮೇಲೆ ಕೆನ್‌ಎಫ್‌ಡಿಜಿ 90–ಇಇ ಎಂದು ಇರುತ್ತದೆ. ನಂತರ ತುಂಡುಗಳನ್ನು ಅಳತೆ ಮಾಡಿ ಮಹಜರ್ ಬರೆದು ವ.ಅ.ಅ. ಕಛೇರಿಗೆ ವಾಹನವನ್ನು ಸಾಗಿಸಲಾಯಿತು. ಸದರಿ ತುಂಡುಗಳ ಮೇಲೆ ಕ್ರಮ ಸಂಖ್ಯೆ ಮತ್ತು ಅರಣ್ಯ ಮೊಕದ್ದಮೆ ಸಂಖ್ಯೆಯನ್ನು ಹಳದಿ ಛಾಕ್‌ನಿಂದ ಬರೆಯಲಾಯಿತು. ದೂರವಾಣಿ ಮೂಲಕ ವಲಯ ಕಚೇರಿಗೆ ಮಾತನಾಡಿ ಅ.ಮೊ.ಸಂಖ್ಯೆ ಪಡೆದು ಬರೆಯಲಾಯಿತು. ಕಚೇರಿ ದೂರವಾಣಿಗೆ ಮೊಬೈಲ್ ಮೂಲಕ ಮಾತನಾಡಿ ನಂಬರ್ ಪಡೆಯಲಾಯಿತು. ಮುಳ್ಳುಕೆರೆ ಬಸ್ ನಿಲ್ದಾಣದ ಮೊಬೈಲ್ ಟವರ್ ಸಿಗುವುದಿಲ್ಲ ಸುಳ್ಳು ಹೇಳುತ್ತೀರಿ ಎಂದರೆ ಸರಿಯಲ್ಲ. ವಲಯ ಕಚೇರಿಯಿಂದ ಯಾವುದೇ ಅರಣ್ಯ ಮೊಕದ್ದಮೆ ಸಂಖ್ಯೆಯನ್ನು ಪಡೆದು ಸೈಜುಗಳ ಮೇಲೆ ಹಾಕಿರುವುದಿಲ್ಲ ಎಂದರೆ ಸರಿಯಲ್ಲ. ಸದರಿ ಸ್ಥಳದಲ್ಲಿ ಮಹಜರ್ ಬರೆದಿಲ್ಲ ಎಂದರೆ ಸರಿಯಲ್ಲ. ಸಾಗರದಿಂದ ಮುಳ್ಳುಕೆರೆ ಬಸ್ ನಿಲ್ದಾಣಕ್ಕೆ 25 ಕಿ.ಮೀ ಆಗುತ್ತದೆ. ಈ ವಾಹನದಲ್ಲಿ ಬೀಟೆ ಸಾಗಿಸುವ ಬಗ್ಗೆ ಸುಳ್ಳು ಮೊಕದ್ದಮೆ ಹಾಕಿರುತ್ತೀರಿ ಎಂದರೆ ಸರಿಯಲ್ಲ. ಜಫ್ತು ಮಾಡಲಾದ ವಾಹನಕ್ಕೂ ಬೀಟೆ ತುಂಡಿಗೂ ಸಂಬಂಧ ಇಲ್ಲ ಎಂದರೆ ಸರಿಯಲ್ಲ. ನನ್ನ ತನಿಖಾ ಸಮಯದಲ್ಲಿ ವಾಹನದ ಮಾಲೀಕರ ಬಗ್ಗೆ ವಿಚಾರಿಸಲಿಲ್ಲ. ಮಹಜರ್‌ನ್ನು ಕಛೇರಿಯಲ್ಲಿ ಬರೆದಿರುತ್ತೀರಿ ಎಂದರೆ ಸರಿಯಲ್ಲ. ಜಫ್ತು ಮಾಡಿದ ಅರಣ್ಯ ಮಾಲಿನ ಫೋಟೋ ತೆಗೆದಿರುತ್ತೇವೆ ಅದನ್ನು ಈ ಕಛೇರಿಗೆ ಹಾಜರುಪಡಿಸಿಲ್ಲ. ಮಹಜರಿಗೆ ಸಾಗರದಿಂದ ನಮ್ಮ ಜೊತೆಗೆ ಬಂದ ಸಿಬ್ಬಂದಿ ಸಹಿ ಮಾಡಿರುತ್ತಾರೆ. ಆದಿನ ಮುಳ್ಳುಕೆರೆ ಬಸ್ ನಿಲ್ದಾಣಕ್ಕೆ ಹೋಗಿಲ್ಲ ಎಂದರೆ ಸರಿಯಲ್ಲ. ಎಲ್ಲ ಪ್ರಕ್ರಿಯೆಯನ್ನು ಕಛೇರಿಯಲ್ಲಿಯೇ ಮಾಡಿದ್ದೀರಿ ಎಂದರೆ ಸರಿಯಲ್ಲ. ಮುಂದಿನ ತನಿಖೆಯನ್ನು ಕೈಗೊಳ್ಳಲು ಮೇಲಾಧಿಕಾರಿಗಳಿಗೆ ಒಪ್ಪಿಸಿರುತ್ತೇನೆ. ಮೇಲಾಧಿಕಾರಿಗಳ ಆದೇಶದ ಮೇರೆಗೆ ತಪಾಸಣೆಗೆ ಹೋಗಿದ್ದೆವು. ಸದರಿ ಮೇಲಾಧಿಕಾರಿಗಳೇ ತನಿಖಾ ವರದಿಯನ್ನು ಸಲ್ಲಿಸಿರುತ್ತಾರೆ'.

ಡಿಫೆನ್ಸ್ ಕಡೆಯವರಿಗೆ ಹೇಳಿಕೆ ನೀಡಲು ದಿ:21–11–2009, 02–01–2010, 27–11–2010 ರಂದು 3 ಬಾರಿ ದಿನಾಂಕ ನೀಡಿದ್ದು, ಅವರು ಹೇಳಿಕೆ ನೀಡಿರುವುದಿಲ್ಲ. ಇದರಿಂದ ವಾಹನದ ಮಾಲೀಕರಿಗೆ ಈ ಪ್ರಕರಣದಲ್ಲಿ ಹೇಳಿಕೆ ನೀಡಲು ಆಸಕ್ತಿ ಇಲ್ಲವೆಂದು ಪರಿಗಣಿಸಿ ವಾದಕ್ಕೆ ದಿನಾಂಕ ನಿಗದಿ ಪಡಿಸಿದೆ.

ದಿ:29–01–2011ರಂದು ವಾದ ಮಂಡಿಸಲು ಈ ಪ್ರಕರಣದ ಬಗ್ಗೆ ವಕೀಲರಿಗೆ ತಿಳಿಸಿದ್ದು, ಈ ಬಗ್ಗೆ ನೋಟಿಸ್‌ನ ಮೇಲೆ ಸದರಿ ಪ್ರಕರಣದ ವಕೀಲರ ಸಹಿ ಪಡೆದಿದೆ. ಆದರೂ ಸಹ ವಾದ ಮಂಡಿಸಲು ಹಾಜರಾಗಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:29–01–2011ರಂದು ವಾದ ಮಂಡಿಸಿ, ಬಾಧ್ಯತೆದಾರರು ವಾಹನದಲ್ಲಿ ಬೀಟೆಯನ್ನು ಅಕ್ರಮವಾಗಿ ಸಾಗಾಣಿಕೆ ಮಾಡುವಾಗ ಬೀಟೆ ನಾಟಾ ಸಮೇತ ಸಿಕ್ಕಿರುತ್ತಾರೆ. ಈ ಬಗ್ಗೆ ವಲಯ ಅರಣ್ಯಾಧಿಕಾರಿ, ಸಾಗರ ಇವರ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಸಲ್ಲಿಸಿರುತ್ತಾರೆ. ಅಲ್ಲದೇ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಭೀತಾಗಿದೆ. ಆದ್ದರಿಂದ ಈ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಕ್ಯಾಂಟರ್ ನಂ:ಕೆಎ–17–ಎ–2887ರಲ್ಲಿ ಬೀಟೆ ಸೈಜ್ 02=0.080 ಎಂ3ನ್ನು ದಿ:11–06–2007 ರಂದು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಲಾಗಿತ್ತೇ. ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಕ್ಯಾಂಟರ್‌ನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ಸೈಜ್‌ನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ

ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ

2. ಎರಡನೇ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:11–06–2007 ರಂದು ಸಾಗರ ವಲಯದ ತ್ಯಾಗರ್ತಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಖಚಿತ ವರ್ತಮಾನದ ಮೇರೆಗೆ ಸಾಗರ ತಾ॥ ಮುಳ್ಳುಗೆರೆ ಬಸ್ ತಂಗುದಾಣದ ಹತ್ತಿರ ಕಾಯುತ್ತಿರುವಾಗ ಒಂದು ವಾಹನ ಕ್ಯಾಂಟರ್ ನಂ: ಕೆಎ–17–ಎ–2887ರಲ್ಲಿ 2 ಬೀಟೆ ನಾಟಾ 0.080 ಎಂ3ನ್ನು ಅಕ್ರಮವಾಗಿ ಸಾಗಿಸಿದ ಬಗ್ಗೆ ಆರೋಪಿ ಸಮೇತ ವಾಹನ ಮತ್ತು ಬೀಟೆ ನಾಟಾವನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಬೀಟೆ ಸೈಜುಗಳನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ಸೈಜುಗಳನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಆರ್.ಬಿ.ರುದ್ರೇಶ್ ಬಿನ್ ಬಸವರಾಜಪ್ಪ, ನಿಟ್ಟುವಳ್ಳಿ ರಸ್ತೆ, ಕೆ.ಟಿ.ಜಿ. ನಗರ, 16ನೇ ತಿರುವು, 1ನೇ ಮುಖ್ಯ ರಸ್ತೆ, ಮನೆ ನಂ. 138/3, ದಾವಣಗೆರೆ ಇವರು ದಿ:15–03–2007 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:23–08–2007 ರಂದು ನೊಂದವಾಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಆರ್.ಸಿ. ಮಾಲೀಕರು ಈ ವಾಹನವನ್ನು ಮಧ್ಯಂತರ ಸುಪರ್ಧಿಗೆ ಬಿಟ್ಟುಕೊಡಲು ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯಂತೆ 6 ಷರತ್ತುಗಳನ್ನು ವಿಧಿಸಿ, ವಾಹನ ಮಧ್ಯಂತರ ಅವಧಿಗೆ ಬಿಡುಗಡೆ ದಿ:29–03–2008 ರಂದು ಆದೇಶವಾಗಿದೆ. ಆದರೂ, ವಾಹನ ಮಾಲೀಕರು ವಾಹನವನ್ನು ಮಧ್ಯಂತರ ಅವಧಿಗೆ ಇಲ್ಲಿಯವರೆಗೂ ಅವರ ಸುಪರ್ಧಿಗೆ ಪಡೆದಿರುವುದಿಲ್ಲ. ಮತ್ತು ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು 3 ಬಾರಿ ದಿನಾಂಕವನ್ನು ನಿಗದಿಪಡಿಸಿರುತ್ತದೆ. ಮತ್ತು ಡಿಫೆನ್ಸ್ ವಾದಕ್ಕೆ 1 ಬಾರಿ ದಿನಾಂಕವನ್ನು ನಿಗದಿಪಡಿಸಿರುತ್ತದೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:11–06–2007 ರಂದು ಕ್ಯಾಂಟರ್ ನಂ: ಕೆಎ–17–ಎ–2887 ರಲ್ಲಿ 2 ಬೀಟೆ ನಾಟಾ 0.080 ಎಂ3 ಅಕ್ರಮವಾಗಿ ಸಾಗಿಸುತ್ತಿದ್ದಾಗ, ಸಾಗರ ವಲಯದ ತ್ಯಾಗರ್ತಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಮತ್ತು ಈ ನ್ಯಾಯಾಲಯಕ್ಕೆ ವಲಯ ಅರಣ್ಯಾಧಿಕಾರಿ, ಸಾಗರ ವಲಯ ಇವರು ವಿಚಾರಣಾ ವರದಿಯೊಂದಿಗೆ ಸಲ್ಲಿಸಿದ್ದಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ:15–03–2008ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಬಾಧ್ಯತೆದಾರರಾಗಲೀ ಹಾಗೂ ಈ ಕೇಸಿನಲ್ಲಿ ವಶಪಡಿಸಿಕೊಂಡ ಕ್ಯಾಂಟರ್‌ಯಾಗಲೀ ಯಾವುದೇ ಅಪರಾಧ ಮಾಡಿಲ್ಲವೆಂದು ತಿಳಿಸಿರುತ್ತಾರೆ. ಆದರೆ, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಅಲ್ಲದೇ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ ಇವರು ಜಪ್ತು ಮಾಡಿದ ಕ್ಯಾಂಟರ್ ಕೆಎ–17–ಎ–2887ನ್ನು ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಬೀಟೆ ಸೈಜ್ 02=0.080 ಎಂ3 ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಕ್ಯಾಂಟರ್ ಕೆಎ–17–ಎ–2887ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ಸೈಜ್ 02=0.080 ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:05–02–2011 ರಂದು** ನನ್ನ ಸಹಿ

ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

ಪಿ.ಆರ್.210

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯ**

**ಬಿ3:ಅಮೊ:ವಾಹನ:ವಿವ.05/08–09, ದಿನಾಂಕ:28–05–2011**

| | | |
|---|---|---|
| ಉಪಸ್ಥಿತರು | :: | ಶ್ರೀ ಮನೋಜ್‌ಕುಮಾರ್ ತ್ರಿಪಾಠಿ, ಭಾ.ಅ.ಸೇ<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| ಪಿರ್ಯಾಧಿದಾರರು | :: | ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ<br>(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| ಭಾದ್ಯತೆದಾರರು | :: | ಶ್ರೀ ನಾಗರಾಜ್ ಬಿನ್ ರಾಮಣ್ಣಗೌಡ, 34 ವರ್ಷ<br>ಮನೆ ನಂ. 11/2, ಗಾಂಧಿಬಜಾರ್, ಆನವಟ್ಟಿ ಟೌನ್<br>ಸೊರಬ ತಾಲ್ಲೂಕು<br>(ಶ್ರೀ ಕೆ.ಹೆಚ್. ಸುದರ್ಶನ್, ವಕೀಲರು, ಸಾಗರ) |

**ಪ್ರಸ್ತಾವನೆ:–**

ದಿ:06–06–2008ರಂದು ಆನವಟ್ಟಿ ವಲಯದ ಆನವಟ್ಟಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಎಂದಿನಂತೆ ಇಲಾಖಾ ವಾಹನ ನಂ ಕೆಎ–15–ಜಿ–124ರಲ್ಲಿ ರಾತ್ರಿ ಗಸ್ತನ್ನು ಸೊರಬ ತಾಲ್ಲೂಕು ಕುಪ್ಪಗಡ್ಡೆ ಹೋಬಳಿ ಆನವಟ್ಟಿ–ಕುಪ್ಪಗಡ್ಡೆ ಮುಖ್ಯ ರಸ್ತೆಯ ಹಾಯ ಕ್ರಾಸ್ ಬಳಿಯಲ್ಲಿ ಹೋಗುತ್ತಿರುವಾಗ ರಾತ್ರಿ ಸುಮಾರು 10 ಗಂಟೆ ಸಮಯದಲ್ಲಿ ಒಂದು ವಾಹನ ಹಾಯ ಗ್ರಾಮದ ಕಡೆಯಿಂದ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ಸ್ವಲ್ಪ ದೂರದಲ್ಲಿ ವಾಹನ ನಿಂತಿತು. ಬ್ಯಾಟರಿ ಸಹಾಯದಿಂದ ವಾಹನದೊಳಗಡೆ ಪರಿಶೀಲಿಸಿದಾಗ ಕೆಲವು ಮರದ ತುಂಡುಗಳಿರುವುದು ಕಂಡು ಬಂದಿತು. ಪಂಚರ ಸಮಕ್ಷಮ ಟಾಟಾ ACE ವಾಹನ ನಂ.ಕೆಎ–15–4784, ಇಂಜಿನ್ ನಂ.275–IDI-05, ಛಾಸಿಸ್ ನಂ.445010–GSZ, ಆಗಿದ್ದು, ವಾಹನದೊಳಗಡೆ ಸಾಗುವಾನಿ ನಾಟಾ 18=0.566ಎಂ3 ಅಳತೆ ಇದ್ದು, ಈ ತುಂಡುಗಳನ್ನು ಗರಗಸ ಮತ್ತು ಕೊಡಲಿಯಿಂದ ಕತ್ತರಿಸಿದ ತುಂಡುಗಳಾಗಿದ್ದವು ಈ ತುಂಡುಗಳ ಮೇಲೆ ಇಲಾಖೆಯ ಯಾವುದೇ ಛಾಪದ ಗುರುತಿರಲಿಲ್ಲ. ವಾಹನದಲ್ಲಿದ್ದ ಚಾಲಕನಾದ, ನಾಗರಾಜ ಎಂ. ಬಿನ್ ಮಲ್ಲೇಶಪ್ಪ, 36 ವರ್ಷ, ಆನವಟ್ಟಿ ವಾಸಿ (ಆಲಿಯಾಸ್ ಎಂ. ನಾಗರಾಜ್ ಬಿನ್ ರಾಮನಗೌಡ)ನೆಂದು ಈ ವಾಹನ ಚಾಲಕನದೆಂದು, ಮತ್ತು ಹಾಯ ವಾಸಿಗಳಾದ 1ನೇ ಆಸಾಮಿ ನಾಸೀರ್ ಬಿನ್ ರಾಜಸಾಬ್, 25 ವರ್ಷ, 2ನೇಯ ಆಸಾಮಿ, ಮಕ್ಬೂಲ್ ಬಿನ್ ರಾಜಾಸಾಬ್, 30 ವರ್ಷ, 3ನೇ ಆಸಾಮಿ ಸಂತೋಷ್ ಬಿನ್ ತಳವಾರ ಹನುಮಂತಪ್ಪ, 20 ವರ್ಷ, ಇವರು ಚಾಲಕನೊಂದಿಗೆ ಬೆಟ್ಟದಕುರ್ಲಿ ಸಾಗುವಾನಿ ನೆಡುತೋಪಿನಲ್ಲಿ ಕಡಿದು ತಯಾರಿಸಿ ಇಟ್ಟಿದ್ದ ತುಂಡುಗಳನ್ನು ವಾಹನಕ್ಕೆ ತುಂಬಿ ಆನವಟ್ಟಿಗೆ ಮಾರಾಟಕ್ಕಾಗಿ ಸಾಗಿಸುತ್ತಿರುವುದೆಂದು, ಮತ್ತು ಈ ಬಗ್ಗೆ ಯಾವುದೇ ರಹದಾರಿ ಇಲ್ಲವೆಂದು ತಿಳಿಸಿದನು. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಪ್ರಥಮ ಮಾಹಿತಿ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ, 4 ಜನ ಆಸಾಮಿಗಳು, ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ಇಲಾಖಾ ಪರ ಜಪ್ತು ಮಾಡಿ, ಈ ತುಂಡುಗಳಿಗೆ ಕ್ರಮ ಸಂಖ್ಯೆಕೊಟ್ಟು ಕರ್ನಾಟಕ ಅರಣ್ಯ ಕಾಯಿದೆ 1963, ಸೆಕ್ಷನ್ 24, 62,71(ಎ) ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಆನವಟ್ಟಿ ವಲಯದ ಅ.ಮೊ.ಸಂಖ್ಯೆ29/08–09ನ್ನು ದಾಖಲಿಸಿ, ಆಸಾಮಿಗಳನ್ನು ಜೆಎಂಎಫ್‌ಸಿ ಸೊರಬಕ್ಕೆ ಹಾಜರ್ಪಡಿಸಿ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:09–06–2008ರಂದು ಆದೇಶವಾಗಿದೆ.

ನಂತರ ಈ ವಾಹನದ "ಬಿ" ಪ್ರತಿ ಒದಗಿಸಲು ಈ ನ್ಯಾಯಾಲಯದ ಪತ್ರ ಸಂಖ್ಯೆ ಬಿ3.ಅಮೊ.ವಾಹನ.05/08–09 ದಿ:12–06–2008ರಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಬರೆಯಲಾಯಿತು. ಸಾರಿಗೆ ಅಧಿಕಾರಿ, ಸಾಗರ ಇವರ ಪತ್ರ ಸಂಖ್ಯೆ ಸಪ್ರಾಸಾಅ.ಸಾಗರ.ಬಿಎಕ್ಸ್08–09 ದಿ:21–06–08ರ ಪತ್ರದಲ್ಲಿ ಈ ವಾಹನದ "ಬಿ" ಪ್ರತಿ ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. "ಬಿ" ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ಹೆಸರು ಶ್ರೀ ಎಂ. ನಾಗರಾಜ್ ಬಿನ್ ರಾಮಣ್ಣಗೌಡ, ಗಾಂಧಿಬಜಾರ್, ಆನವಟ್ಟಿ, ಸೊರಬ ತಾಲ್ಲೂಕು ಇದ್ದು, ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ಕಾರಣ ಕೇಳಿ ನೋಟಿಸ್‌ನ್ನು 30 ದಿನ ಕಾಲಾವಕಾಶ ನೀಡಿ ದಿ:14–07–08 ರಂದು ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರ ಮುಖಾಂತರ ಜಾರಿ ಮಾಡಿರುತ್ತದೆ.

ಆರ್.ಸಿ. ಮಾಲೀಕರು ಮನವಿಯನ್ನು ವಕೀಲರ ಮುಖಾಂತರ ತಯಾರಿಸಿ, ಇವರು ದಿನಾಂಕ: 18–07–08ರಂದು ಈ ನ್ಯಾಯಾಲಯಕ್ಕೆ ಕ್ಲೈಮು ಅರ್ಜಿ ಸಲ್ಲಿಸಿ, ಈ ವಾಹನ ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿರುತ್ತಾರೆ. ಇವರ ಕೋರಿಕೆಯ ಅರ್ಜಿಯನ್ನು ದಿ:07–02–2009 ರಂದು ತಿರಸ್ಕರಿಸಿ ಈ ನ್ಯಾಯಾಲಯದಿಂದ ಆದೇಶ ಹೊರಡಿಸಿದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ರವೀಂದ್ರ, ವನಪಾಲಕ, ಆನವಟ್ಟಿ ವಲಯ, ಇವರನ್ನು ದಿ:01–08–2009 ರಂದು ಕರೆಯಿಸಿ ಸತ್ಯಪ್ರತಿಜ್ಞೆ ಭೋದಿಸಿ, ಮುಖ್ಯವಿಚಾರಣೆ, ಸ.ಸ.ಅ. ರಿಂದ "ಕಳೆದ ನಾಲ್ಕು ವರ್ಷಗಳಿಂದ ಆನವಟ್ಟಿ ವಲಯದ ನಗರ ಶಾಖೆಯಲ್ಲಿ ವನಪಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:06–06–2008 ರಂದು ನಾನು ಮತ್ತು ಸಿಬ್ಬಂದಿಯವರು ಗಸ್ತು ಮಾಡುತ್ತಾ, ಹಾಯಾ ಕ್ರಾಸ್ ಬಳಿ ಬಂದಾಗ ಹಾಯಾ ಗ್ರಾಮದ ಕಡೆಯಿಂದ ಒಂದು ವಾಹನ ಬರುತ್ತಿದ್ದು, ಅದನ್ನು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ ಅದರಲ್ಲಿ ವಾಹನ ಚಾಲಕ ಮಾತ್ರ ಇದ್ದು, ಆತನನ್ನು ವಿಚಾರಿಸಿದಾಗ ಆತನ ಹೆಸರು ನಾಗರಾಜ್ ಎಂದು ತಿಳಿಸಿದ್ದು, ವಾಹನವನ್ನು ಪರಿಶೀಲಿಸಿದಾಗ 18 ಸಾಗುವಾನಿ ತುಂಡುಗಳಿದ್ದು, ಅವುಗಳನ್ನು ಸಾಗಿಸಲು ಯಾವುದೇ ರಹದಾರಿ ಇರಲಿಲ್ಲ. ವಿಚಾರಿಸಿದಾಗ ಸಂತೋಷ್, ನಾಸಿರ್ ರವರ ಮನೆಯಿಂದ ತಂದಿರುವುದಾಗಿ ಹೇಳಿದರು. ಅವುಗಳ ಮೇಲೆ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ. ವಾಹನವನ್ನು ಪರಿಶೀಲಿಸಲಾಗಿ ಟಾಟಾ ಏಸ್ ನಂ: ಕೆಎ–15–4784 ಆಗಿತ್ತು. ನಂತರ ಸದರಿ ತುಂಡುಗಳನ್ನು ಕ್ರಮ ಸಂಖ್ಯೆ ಕೊಟ್ಟು, ಅಳತೆ ಮಾಡಿ ಇಲಾಖಾ ಛಾಪಾ ಹೊಡೆದು ವಾಹನ ಮತ್ತು ತುಂಡುಗಳನ್ನು ಅಮಾನತ್ತು ಪಡಿಸಿಕೊಂಡೆವು. ಆಗ ಮಾಡಿದ ಮಹಜರ್‌ನ್ನು ನೋಡಿದ್ದು, ಅದನ್ನು ನಿಪಿ–1 ಎಂದು ನನ್ನ ಸಹಿಯನ್ನು 1ಎ ಎಂದು ಗುರುತಿಸಿದೆ. ನಂತರ ಆನವಟ್ಟಿ ವಲಯ ಕಛೇರಿಗೆ ಬಂದು ಪ್ರಥಮ ವರ್ತಮಾನ ವರದಿ ತಯಾರಿಸಿದ್ದು, ಅದನ್ನು ನಿಪಿ–2 ಎಂದು, ನನ್ನ ಸಹಿಯನ್ನು 2ಎ ಎಂದು ಗುರುತಿಸಿದೆ. ನಂತರ ಜಪ್ತು ವರದಿ ತಯಾರಿಸಿದ್ದು, ಅದನ್ನು ನಿಪಿ3 ಎಂದು, ನನ್ನ ಸಹಿಯನ್ನು 3ಎ ಎಂದು ಗುರುತಿಸಿದೆ. ನಂತರ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸುತ್ತೇವೆ. ನಂತರ ತುಂಡುಗಳನ್ನು ಆನವಟ್ಟಿ ನಾಟಾ ಸಂಗ್ರಹಾಲಯಕ್ಕೂ, ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರಕ್ಕೆ ಸಾಗಿಸಿದೆವು. ಆ ದಿನ ನಾವು ಹಿಡಿದ ಆರೋಪಿಯನ್ನು ಗುರುತಿಸಿದ್ದು ಅವರೇ ಬಾಧ್ಯತೆದಾರರಾಗಿದ್ದಾರೆ. ವಾಹನವನ್ನು ಆರೋಪಿಯು ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಿಸಲು ಉಪಯೋಗಿಸಿರುವುದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗಿ ಕೋರಿಕೊಳ್ಳುತ್ತೇನೆ.

ಪಾಟಿಸವಾಲು: ಕೆ.ಹೆಚ್.ಎಸ್. ವಕೀಲರಿಂದ ಗಸ್ತಿನ ವ್ಯಾಪ್ತಿ ಹಾಯಾ ಗ್ರಾಮದಿಂದ ನೆಗವಾಡಿವರೆಗೆ ಸುಮಾರು 20 ಕಿ.ಮೀ. ಬರುತ್ತದೆ. ಆ ದಿನ ನಾವು 5 ಜನ ಗಸ್ತಿಗೆ ಹೋಗಿದ್ದೆವು. 5 ಜನರು ಒಟ್ಟಿಗೆ ಇದ್ದೆವು. ನಾವು ಹಾಯಾ ಗ್ರಾಮದ ಒಳಗೆ ಹೋಗಿರಲಿಲ್ಲ. ಮುಖ್ಯ ರಸ್ತೆಯ ಕ್ರಾಸ್ ಬಳಿ ನಿಂತಿದ್ದೆವು. ನಾವು ನಿಂತಲ್ಲಿಂದ ಸುಮಾರು 150 ಮೀ. ದೂರದಿಂದ ವಾಹನ ಬರುತ್ತಿರುವುದನ್ನು ನೋಡಿದೆವು. ವಾಹನ ನಿಲ್ಲಿಸಲು ಸೂಚನೆ ನೀಡಿದ್ದು, ಚಾಲಕನು ವಾಹನ ನಿಲ್ಲಿಸಿದ್ದು, ಓಡಿ ಹೋಗಲು ಪ್ರಯತ್ನ ಮಾಡಲಿಲ್ಲ. ಆತನನ್ನು ವಿಚಾರಿಸಲಾಗಿ ಉಳಿದ 3 ಜನ ಆರೋಪಿಗಳು ರಹದಾರಿ ಇರುವುದಾಗಿ ತಿಳಿಸಿರುವುದರಿಂದ ಸದರಿ ನಾಟಾಗಳನ್ನು ಸಾಗಿಸುತ್ತಿರುವುದಾಗಿ ತಿಳಿಸಿದನು. ಘಟನೆ ನಡೆದಾಗ ರಾತ್ರಿ ಸುಮಾರು 10–30 ಗಂಟೆಯಾಗಿತ್ತು. ಆ ಸಮಯದಲ್ಲಿ ಅಲ್ಲಿ ಜನರಾಗಲೀ, ವಾಹನ ಓಡಾಟವಾಗಲೀ ಇರಲಿಲ್ಲ. ವಾಹನದಲ್ಲಿದ್ದ 18 ತುಂಡುಗಳು ವಿವಿಧ ಅಳತೆಯ ತುಂಡುಗಳಾಗಿದ್ದವು. ನಮ್ಮ ಜೊತೆ ಇದ್ದ 5 ಜನ ಸಿಬ್ಬಂದಿಗಳು ಮಹಜರ್ ಬರೆಯಲು ಸಹಕರಿಸಿರುತ್ತಾರೆ. ಸ್ವತಂತ್ರ ಸಾಕ್ಷಿ ಇರಲಿಲ್ಲ. ಬಸವರಾಜ, ರುದ್ರನಾಯ್ಕ, ಗೋಪಾಲಕೃಷ್ಣ, ಚೌಡಪ್ಪ, ರಾಜಪ್ಪ ಇವರು ಮಹಜರ್‌ಗೆ ಸಹಿ ಮಾಡಿರುತ್ತಾರೆ. ಮಹಜರ್‌ನ್ನು ಬಸವರಾಜ ಬರೆದಿರುತ್ತಾರೆ. ಸದರಿ ವಾಹನ ಚಾಲಕರು ವಾಹನದಲ್ಲಿರುವ ತುಂಡುಗಳಿಗೆ ರಹದಾರಿ ತರುತ್ತಿರುವುದನ್ನು ತಿಳಿಸಿದ್ದು, ಅದನ್ನು ಮಹಜರ್‌ನಲ್ಲಿ ನಮೂದಿಸಿರುವುದಿಲ್ಲ. ಮಹಜರ್‌ನ್ನು ಅದೇ ದಿನ ರಾತ್ರಿ 10–30 ರಿಂದ 11–00 ವರೆಗೆ ಬರೆದಿರುತ್ತೇವೆ. ಜೀಪಿನ ಲೈಟ್ ಬೆಳಕಿನ ಸಹಾಯದಿಂದ ಮಹಜರ್ ಬರೆದೆವು. ಈ ಬಗ್ಗೆ ಮಹಜರ್‌ನಲ್ಲಿ ನಮೂದಿಸಿರುವುದಿಲ್ಲ. ಆಮಾನತ್ತು ಪಡಿಸಿದ ತುಂಡಗಳು ಹಂಬಸಿಯ ತುಂಡುಗಳಾಗಿರುತ್ತವೆ. ಉಳಿದವರನ್ನು ಪತ್ತೆ ಮಾಡಲು ಹೋಗಿದ್ದು, ಅವರು ಸಿಕ್ಕಿರುವುದಿಲ್ಲ. ವಾಹನದಲ್ಲಿ ಗರಗಸ, ಕೊಡಲಿ ಇರಲಿಲ್ಲ. ನಾಗರಾಜ ಬಂದಿದ್ದಾಗಲೀ, 18 ತುಂಡುಗಳನ್ನು ಹಿಡಿದಿದ್ದಾಗಲೀ, ಸ್ಥಳದಲ್ಲಿ ಮಹಜರ್ ಮಾಡಿದ್ದಾಗಲೀ, ಅಳತೆ ಮಾಡಿದ್ದಾಗಲೀ, ಸ್ಥಳದಲ್ಲಿಯೇ ನಂಬರ್ ಕೊಟ್ಟಿರುವುದಾಗಲೀ ಸುಳ್ಳು ಎಂದರೆ ಸರಿಯಲ್ಲ. ಬಾಧ್ಯತೆದಾರರು ಯಾವುದೇ ತಪ್ಪು ಮಾಡಿಲ್ಲವೆಂದು ಕಂಡುಬಂದರೂ ಸುಳ್ಳು ಮೊಕದ್ದಮೆ ದಾಖಲಿಸಿದ್ದೀರಿ ಎಂದರೆ ಸರಿಯಲ್ಲ. ವಾಹನವನ್ನು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:26–09–2009, 21–08–2010, 20–11–2010,19–02–2011, 26–02–2011 ರಂದು ಮತ್ತು ವಾದ ಮಂಡಿಸಲು ದಿ:05–03–2011, 02–04–2011 ರಂದು ದಿನಾಂಕ ನೀಡಿ ತಿಳಿಸಿದರೂ ಸಹ ಡಿಫೆನ್ಸ್ ಕಡೆಯವರು ಯಾರು ವಿಚಾರಣೆಗ ಹಾಜರಾಗಿರುವುದಿಲ್ಲ. ಡಿಫೆನ್ಸ್ ಕಡೆಯವರಿಗೆ ಈ ಪ್ರಕರಣದಲ್ಲಿ ಹೇಳಿಕೆ ನೀಡಲು ಮತ್ತು ವಾದ ಮಂಡಿಸಲು ಆಸಕ್ತಿ ಇಲ್ಲವೆಂದು ತೀರ್ಮಾನಿಸಿ ಮುಂದಿನ ಕ್ರಮಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:02–04–2011ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಟಾಟಾ ಏಸ್ ಕೆಎ–15–4784 ರಲ್ಲಿ 18 ಸಾಗುವಾನಿ ನಾಟಾ 0.566ಎಂ3ನ್ನು ದಿ:06–06–2008 ರಂದು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಟಾಟಾ ಏಸ್‌ನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಸಾಗುವಾನಿ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?
4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:06–06–2008 ರಂದು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಮತ್ತು ಸಿಬ್ಬಂದಿಯವರು ಸೊರಬ ತಾ॥ ಕುಪ್ಪಗಡ್ಡೆ ಹೋಬಳಿ ಆನವಟ್ಟಿ–ಕುಪ್ಪಗಡ್ಡೆ ಮುಖ್ಯ ರಸ್ತೆಯ ಹಾಯಾ ಕ್ರಾಸ್ ಬಳಿ ಎಂದಿನಂತೆ ರಾತ್ರಿ ಗಸ್ತು ಮಾಡುತ್ತಿರುವಾಗ ರಾತ್ರಿ ಸುಮಾರು 10–00 ಗಂಟೆ ಸಮಯದಲ್ಲಿ ಹಾಯಾ ಕಡೆಯಿಂದ ಒಂದು ವಾಹನ ಬರುತ್ತಿರುವುದನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ, ಅದರಲ್ಲಿ ಸಾಗುವಾನಿ ನಾಟಾ 18=0.566 ಎಂ3ನ್ನು ಅಕ್ರಮವಾಗಿ ಸಾಗಿಸಿದ ಬಗ್ಗೆ ವಾಹನ ಮತ್ತು ಸಾಗುವಾನಿ ನಾಟಾವನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಸಾಗುವಾನಿ ನಾಟಾವನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಸಾಗುವಾನಿ ನಾಟಾವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ನಾಗರಾಜ ಬಿನ್ ರಾಮಣ್ಣಗೌಡ, ಮನೆ ನಂ. 11/2, ಗಾಂಧಿಬಜಾರ್, ಆನವಟ್ಟಿ ಟೌನ್, ಸೊರಬ ತಾ॥ ಇವರು ದಿ:18–07–2008 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:14–07–2008ರಂದು ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು ಐದು ಬಾರಿ ದಿನಾಂಕಗಳನ್ನು ನೀಡಲಾಗಿದ್ದು. ಮತ್ತು ಡಿಫೆನ್ಸ್ ವಾದ ಮಂಡಿಸಲು ಎರಡು ಬಾರಿ ದಿನಾಂಕಗಳನ್ನು ನೀಡಲಾಗಿತ್ತು. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:06–06–2008 ರಂದು ಟಾಟಾ ಏಸ್ ನಂ: ಕೆಎ–15–4784ರಲ್ಲಿ 18 ಸಾಗುವಾನಿ ನಾಟಾ 0.566 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ, ಆನವಟ್ಟಿ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಮತ್ತು ಈ ನ್ಯಾಯಾಲಯಕ್ಕೆ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಇವರು ವಿಚಾರಣಾ ವರದಿ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ:18–07–2008ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ, ಪ್ರತಿನಿಧಿಗಳಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಇವರು ಜಪ್ತು ಮಾಡಿದ ಟಾಟಾ ಏಸ್ ಕೆಎ–15–4784 (ಇಂಜಿನ್ ನಂ:275–IDI-

05, ಛಾಸ್ಸಿಸ್ ನಂಬರ್:445010–GSZ) ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಸಾಗುವಾನಿ ನಾಟಾ 18=0.566ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:28–05–2011** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.610 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯ**

**ಕ್ರ: ಬಿ3:ಅಮೊ:ವಾಹನ:ವಿವ:11/08–09, ದಿನಾಂಕ:28–05–2011**

| | | |
|---|---|---|
| ಉಪಸ್ಥಿತರು | :: | ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಣ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| ಫಿರ್ಯಾಧಿದಾರರು | :: | ವಲಯ ಅರಣ್ಯಾಧಿಕಾರಿ,<br>ಶಿಕಾರಿಪುರ ವಲಯ,<br>(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| ಭಾದ್ಯತೆದಾರರು | :: | ಶ್ರೀ ದಾನಪ್ಪ ಬಿನ್ ರಾಮಪ್ಪ, 30 ವರ್ಷ,<br>ಕೆಂಗಟೆ, ಶಿಕಾರಿಪುರ ತಾ॥ (ಶ್ರೀ ಹೆಚ್.ಎನ್.ದಿವಾಕರ, ವಕೀಲರು, ಸಾಗರ) |

**ಪ್ರಸ್ತಾವನೆ:–**

ದಿ:18–07–2008 ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಶಿಕಾರಿಪುರ ಉಪ ವಿಭಾಗ, ಶಿಕಾರಿಪುರ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಮತ್ತು ಇವರ ಸಿಬ್ಬಂದಿಗಳು ಇಲಾಖಾ ಜೀಪಿನಲ್ಲಿ ಶಿಕಾರಿಪುರ ತಾ॥ ಕಾಳೇನಹಳ್ಳಿ ಕ್ರಾಸ್ ಬಳಿ ಬೆಳಗಿನ ಜಾವ ಸುಮಾರು 2–45 ಗಂಟೆಗೆ ಕಾಯುತ್ತಿರುವಾಗ ಆನಂದಪುರಂ ಕಡೆಯಿಂದ ಬೆಳಗಿನ ಜಾವ ಸುಮಾರು 4–00 ಗಂಟೆ ಹೊತ್ತಿಗೆ ಒಂದು ಕ್ಯಾಂಟರ್ ಬರುತ್ತಿರುವುದನ್ನು ಕೈಮಾಡಿ ನಿಲ್ಲಿಸಲು ಸೂಚಿಸಿದಾಗ ವಾಹನ ನಿಲ್ಲಿಸದೇ ವೇಗವಾಗಿ ಮುಂದೆ ಸಾಗಿರುತ್ತದೆ. ಅದನ್ನು ಇಲಾಖಾ ಜೀಪಿನಲ್ಲಿ ಬೆನ್ನಟ್ಟಿ ಶಿಕಾರಿಪುರ ತಾ॥ ಶಿಕಾರಿಪುರದಿಂದ–ಆನಂದಪುರಂಕ್ಕೆ ಹೋಗುವ PWD ರಸ್ತೆಯ ಗಾಮಾ ಕ್ರಾಸ್ ಬಳಿ ಕ್ಯಾಂಟರ್‌ನ್ನು ನಿಲ್ಲಿಸಿ ಅದರಲ್ಲಿದ ಆಸಾಮಿಗಳು ಕೈಗೆ ಸಿಗದೇ ಪರಾರಿಯಾದರು. ನಂತರ ಪಂಚರ ಸಮಕ್ಷಮ ವಾಹನ ಪರಿಶೀಲಿಸಲಾಗಿ ಕ್ಯಾಂಟರ್ ಕೆಎ–14–7496 ಇಂಜಿನ್ ನಂ: 4D31080745685 ಛಾಸಿಸ್ ನಂ: 17EO80875910 ಆಗಿದ್ದು, ವಾಹನದ ಬಾಡಿಯೊಳಗೆ ಹಸಿಯಾದ 12 ಬೀಟೆ ನಾಟಾವಿದ್ದು, ಅದರ ಅಳತೆ 1.698ಎಂ3 ಪ್ರಮಾಣವಿದ್ದು, ಮತ್ತು ಈ ನಾಟಾಗಳ ತುದಿಬುಡದಲ್ಲಿ ಇಲಾಖಾ ಛಾಪಾದ ಗುರುತಿರಲಿಲ್ಲ. ಹಾಗೂ ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಪ್ರಥಮ ವರ್ತಮಾನ ವರದಿ, ಮಹಜರ್‌ವರದಿ ಜಪ್ತುವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅ.ಮೊ.ಸಂ. 19/08–09ನ್ನು ದಾಖಲಿಸಿ, ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್‌ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿರುತ್ತದೆ.

ನಂತರ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್ ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3.ಅಮೊ.ವಾಹನ.ವಿವ.11/08–09 ದಿ:25–07–2008 ರಂದು ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರಿಗೆ ಪತ್ರ ಬರೆದು ಕೋರಲಾಯಿತು. ಅದರಂತೆ ಸಾರಿಗೆ ಅಧಿಕಾರಿ, ಶಿವಮೊಗ್ಗ ರವರು ಈ ವಾಹನದ ಸಿ.ಸಿ.ಯನ್ನು ದಿ:24–11–2005 ರಂದು ಸಾರಿಗೆ ಅಧಿಕಾರಿ, ಸಾಗರ ಇವರಿಗೆ ವರ್ಗಾಯಿಸಿದ ಬಗ್ಗೆ ಪ್ರಾಸಾಅ.ಶಿ.ಬಿವಹಿ.ವಿವ. 2008–09 ದಿ:03–11–2008ರ ಪತ್ರವು ದಿ:11–11–2008 ರಂದು ಈ ನ್ಯಾಯಾಲಯಕ್ಕೆ ಸ್ವೀಕೃತವಾಗಿದೆ. ಸಾರಿಗೆ ಅಧಿಕಾರಿ, ಶಿವಮೊಗ್ಗದವರು ತಿಳಿಸಿದಂತೆ ಈ ನ್ಯಾಯಾಲಯದಿಂದ ಬಿ3.ಅಮೊ.ವಾಹನ.ವಿವ.11/08–09 ದಿ:11–11–2008 ರಲ್ಲಿ ಸಾರಿಗೆ ಅಧಿಕಾರಿ ಸಾಗರ ಇವರಿಗೆ ಪತ್ರ ಬರೆದು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಕೋರಲಾಯಿತು. ಅದರಂತೆ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಸಾರಿಗೆ ಅಧಿಕಾರಿ, ಸಾಗರ ಇವರು ಸಪ್ರಾಸಾಅ.ಸಾಗರ.ಆರ್‌ಜಿಎನ್.08–09 ದಿ:18–11–2008ರ ಪತ್ರವು ದಿ:10–12–2008ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ಹೆಸರು ಶ್ರೀ ದಾನಪ್ಪ ಬಿನ್ ರಾಮಪ್ಪ, ಕೆಂಗಟ್ಟೆ, ಶಿಕಾರಿಪುರ ತಾ॥ ಆಗಿದ್ದು. ಇವರಿಗೆ ಈ ಪ್ರಕರಣದಲ್ಲಿ ಜಪ್ತಾದ ನಿಮ್ಮ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎನ್ನುವುದಕ್ಕೆ ನಿಮ್ಮ ಸಮಜಾಯಿಷಿ ಮತ್ತು ಈ ವಾಹನಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ, ಕಾರಣ ಕೇಳಿ ನೋಟಿಸ್‌ನ್ನು, ದಿ:12–01–2009 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ.

ಶ್ರೀ ದಾನಪ್ಪ ಬಿನ್ ರಾಮಪ್ಪ, ಸುಮಾರು 30 ವರ್ಷ, ಕೆಂಗಟ್ಟೆ, ಶಿಕಾರಿಪುರ ತಾ॥ ಇವರು ವಕೀಲರ ಮುಖಾಂತರ ಮನವಿ ತಯಾರಿಸಿ ಈ ವಾಹನ ಮಧ್ಯಂತರ ಅವಧಿಗೆ ಬಿಡಲು ಮತ್ತು ಕಾಂಪೌಂಡ್ ಮೂಲಕ ಕಡಿಮೆ ದಂಡ ವಿಧಿಸಿ ವಾಹನವನ್ನು ವಾಹನ ಮಾಲೀಕರಿಗೆ ಬಿಟ್ಟುಕೊಡುವಂತೆ ಕೋರಿ ಅರ್ಜಿಯನ್ನು ದಿ:25–07–2008 ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ಅರ್ಜಿ ಸಲ್ಲಿಸಿದ ನಂತರ ದಿ:21–03–2009,

30–05–2009, 04–07–2009 ಮತ್ತು 19–09–2009, 26–09–2009 ರಂದು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ವಿಚಾರಣೆಗೆ ಹಾಜರಾಗಿರುವುದಿಲ್ಲ. ಇದರಿಂದ ಮಧ್ಯಂತರ ಅರ್ಜಿಯ ವಿಚಾರಣೆಯನ್ನು ಸ್ಥಗಿತಿಗೊಳಿಸಿ ಮುಖ್ಯ ವಿಚಾರಣೆ ದಿನಾಂಕ ನಿಗದಿಪಡಿಸಿ ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆ ಪಡೆಯಲು ಮುಂದಿನ ಕ್ರಮಕೈಗೊಳ್ಳಲಾಯಿತು.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಹೆಚ್.ಎಂ.ಜಗದೀಶ, ವಲಯ ಅರಣ್ಯಾಧಿಕಾರಿ, ಗುಬ್ಬಿ ವಲಯ, ಇವರು ದಿ:17–07–2009 ರಂದು ನ್ಯಾಯಾಲಯಕ್ಕೆ ಹಾಜರಾಗಿರುತ್ತಾರೆ. ಇವರಿಗೆ ಸತ್ಯ ಪ್ರತಿಜ್ಞೆ ಬೋಧಿಸಲಾಯಿತು. ಸಹಾಯಕ ಸರ್ಕಾರಿ ಅಭಿಯೋಜಕರಿಂದ ಮುಖ್ಯ ವಿಚಾರಣೆ "ನಾನು ಆಗಸ್ಟ್ 2005 ರಿಂದ ನವೆಂಬರ್ 2008 ರವರೆಗೆ ಶಿಕಾರಿಪುರ ವಲಯದಲ್ಲಿ ವಲಯ ಅರಣ್ಯಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:18–07–2008 ರಂದು ನನಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಬಂದ ಮಾಹಿತಿಯ ಮೇರೆಗೆ ನಾನು ಮತ್ತು ನನ್ನ ಇತರೆ ಸಿಬ್ಬಂದಿಗಳೊಂದಿಗೆ ಶಿಕಾರಿಪುರ–ಆನಂದಪುರ ರಸ್ತೆಯಲ್ಲಿ ಇಲಾಖಾ ವಾಹನದಲ್ಲಿ ಗಸ್ತು ಮಾಡುತ್ತಾ ಬಂದು ಕಾಳೇನಹಳ್ಳಿ ಹತ್ತಿರ ಕಾಯುತ್ತಿದ್ದಾಗ ಬೆಳಗಿನ ಜಾವ 4 ಗಂಟೆ ಸಮಯಕ್ಕೆ ಆನಂದಪುರಂ ಕಡೆಯಿಂದ ಒಂದು ಕ್ಯಾಂಟರ್ ವಾಹನ ಬರುತ್ತಿದ್ದು, ಅದಕ್ಕೆ ಕೈ ತೋರಿಸಿ ನಿಲ್ಲಿಸಲು ಸೂಚಿಸಿದಾಗ, ಆ ವಾಹನ ನಿಲ್ಲದೇ ಮುಂದೆ ಹೋಗಿದ್ದರಿಂದ ನಾವು ಆ ವಾಹನವನ್ನು ಬೆನ್ನ ಟ್ಟಿ ಹೋದೆವು. ಗಾಮ ಕ್ರಾಸ್ ಬಳಿ ವಾಹನವನ್ನು ನಿಲ್ಲಿಸಿ, ಅದರಲ್ಲಿದ್ದ 4–5 ಜನ ಇಳಿದು ಓಡಿಹೋದರು. ಅವರನ್ನು ಹಿಡಿಯಲು ಪ್ರಯತ್ನಿಸಿದರೂ ಸಿಗಲಿಲ್ಲ. ವಾಹನವನ್ನು ಪರಿಶೀಲಿಸಿದಾಗ ಅದರ ಸಂಖ್ಯೆ: ಕೆಎ–14–7496 ಆಗಿದ್ದು, ಅದರಲ್ಲಿ ಬೀಟೆ ಜಾತಿಯ 12 ತುಂಡುಗಳಿದ್ದವು. ಸದರಿ ತುಂಡುಗಳು ಆಗ ತಾನೇ ಕತ್ತರಿಸಿದ ಹಸಿ ತುಂಡುಗಳಾಗಿದ್ದು, ಅವುಗಳ ಮೇಲೆ ಇಲಾಖಾ ಯಾವುದೇ ಛಾಪಾ ಇರಲಿಲ್ಲ. ಆದ್ದರಿಂದ ಇದನ್ನು ಅಕ್ರಮ ಸಾಗಾಣಿಕೆ ಎಂದು ತೀರ್ಮಾನಿಸಿ, ಅಳತೆ ಮಾಡಿ ತುಂಡುಗಳಿಗೆ ಕ್ರಮ ಸಂಖ್ಯೆ ಕೊಟ್ಟು, ಛಾಪಾ ಹೊಡೆದು, ವಾಹನ ಮತ್ತು ತುಂಡುಗಳನ್ನು ಜಪ್ತುಮಾಡಿ ಮಹಜರ್ ಬರೆದೆವು. ಸ್ಥಳದಲ್ಲಿ ಮಾಡಿದ ಮಹಜರ್‌ನ್ನು ಈಗ ನೋಡುತ್ತಿದ್ದು, ಅದನ್ನು ನಿಶಾನೆ ಪಿ1 ಎಂದು, ಅದರಲ್ಲಿನ ನನ್ನ ಸಹಿಯನ್ನು ಪಿ1ಎ ಎಂದು ಗುರ್ತಿಸಿದೆ. ನಂತರ ವಾಹನ ಮತ್ತು ತುಂಡುಗಳೊಂದಿಗೆ ಕಛೇರಿಗೆ ಬಂದೆವು. ಮುಂದಿನ ಕ್ರಮ ತೆಗೆದುಕೊಳ್ಳಲು ವನಪಾಲಕರಿಗೆ ಸೂಚಿಸಿದೆ. ನಂತರ ಮುಂದಿನ ತನಿಖೆಯನ್ನು ಪಡೆದು ವಿಚಾರಣಾ ವರದಿ ತಯಾರಿಸಿದೆನು. ವಿಚಾರಣಾ ವರದಿಯನ್ನು ನೋಡುತ್ತಿದ್ದು, ಅದನ್ನು ನಿಶಾನೆ ಪಿ4 ಎಂದು ನನ್ನ ಸಹಿಯನ್ನು ಪಿ4ಎ ಎಂದು ಗುರ್ತಿಸಿದೆ. ಸದರಿ ವಾಹನವನ್ನು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಬಳಸಿದ್ದರಿಂದ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ."

ಡಿಫೆನ್ಸ್ ಕಡೆಯ ವಕೀಲರಿಗೆ ಪಾಟಿಸವಾಲು ಮಂಡಿಸಲು ದಿ:17–07–2010 ದಿನಾಂಕವನ್ನು ತಿಳಿಸಿದ ನೋಟಿಸ್ ಮೇಲೆ ವಕೀಲರು ಸಹಿ ಮಾಡಿರುತ್ತಾರೆ. ಆದರೆ, ಸದರಿ ದಿನಾಂಕದಂದು ಆರ್.ಸಿ. ಮಾಲೀಕರಾಗಲೀ, ವಕೀಲರಾಗಲೀ ವಿಚಾರಣೆಗೆ ಹಾಜರಾಗಿರುವುದಿಲ್ಲ. ಆದ್ದರಿಂದ ಮುಂದಿನ ಕ್ರಮಕೈಗೊಳ್ಳಲಾಯಿತು.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:07–08–2010 ರಂದು ಮತ್ತು ವಾದ ಮಂಡಿಸಲು ದಿ:26–02–2011 ದಿನಾಂಕ ನೀಡಿ ತಿಳಿಸಿದರೂ ಸಹ ಡಿಫೆನ್ಸ್ ಕಡೆಯವರು ಯಾರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಡಿಫೆನ್ಸ್ ಕಡೆಯವರಿಗೆ ಈ ಪ್ರಕರಣದಲ್ಲಿ ಹೇಳಿಕೆ ನೀಡಲು ಮತ್ತು ವಾದ ಮಂಡಿಸಲು ಆಸಕ್ತಿ ಇಲ್ಲವೆಂದು ತೀರ್ಮಾನಿಸಿ ಮುಂದಿನ ಕ್ರಮಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:02–04–2011ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಕ್ಯಾಂಟರ್ ಕೆಎ–14–7496 ರಲ್ಲಿ ಬೀಟೆ ಸೈಜ್ 12=1.698 ಎಂ3ನ್ನು ದಿ:18–07–2008 ರಂದು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಕ್ಯಾಂಟರ್‌ನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?
4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:18–07–2008 ರಂದು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾ॥ ಕಾಳೇನಹಳ್ಳಿ ಕ್ರಾಸ್ ಬಳಿ ಬೆಳಗಿನ ಕಾಯುತ್ತಿರುವಾಗ ಸುಮಾರು 4–00 ಗಂಟೆಗೆ ಸಮಯದಲ್ಲಿ ಆನಂದಪುರಂ ಕಡೆಯಿಂದ ಒಂದು ಕ್ಯಾಂಟರ್ ನಂ:ಕೆಎ–14–7496ರಲ್ಲಿ ಬೀಟೆ ನಾಟಾ 12=1.698 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿರುವುದನ್ನು ಪತ್ತೆಹಚ್ಚಿ, ವಾಹನ ಮತ್ತು ಬೀಟೆ ಸೈಜ್‌ನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಬೀಟೆ ಸೈಜ್‌ನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ಸೈಜ್‌ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ದಾನಪ್ಪ ಬಿನ್ ರಾಮಪ್ಪ, 30 ವರ್ಷ, ಕೆಂಗಟ್ಟೆ, ಶಿಕಾರಿಪುರ ತಾ॥ ಇವರು ದಿ:25–07–2008 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:12–01–2009 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು ಒಂದು ಬಾರಿ ದಿನಾಂಕವನ್ನು ನಿಗದಿಪಡಿಸಿರುತ್ತದೆ. ಮತ್ತು ಡಿಫೆನ್ಸ್ ವಾದಕ್ಕೆ ಒಂದು ಬಾರಿ ದಿನಾಂಕವನ್ನು ನಿಗದಿಪಡಿಸಿರುತ್ತದೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:18–07–2008 ರಂದು ಕ್ಯಾಂಟರ್ ನಂ: ಕೆಎ–14–7496ರಲ್ಲಿ 12 ಬೀಟೆ ನಾಟಾ 1.698 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ, ಶಿಕಾರಿಪುರ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಮತ್ತು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯು ವಿಚಾರಣಾ ವರದಿ ಸಲ್ಲಿಸಿ 71(ಎ) ರೀತ್ಯಾ ಕ್ರಮಕೈಗೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ:02–07–2008ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ, ಪ್ರತಿನಿಧಿಗಳಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಇವರು ಜಪ್ತು ಮಾಡಿದ ಕ್ಯಾಂಟರ್ ಆಟೋ ಕೆಎ–15–7496ನ್ನು ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಬೀಟೆ ನಾಟಾ 12=1.698 ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:28–05–2011** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

ಪಿ.ಆರ್.608

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ:ವಿವ–16/09–10, ದಿನಾಂಕ:28–05–2011**

| | | |
|---|---|---|
| ಉಪಸ್ಥಿತರು | : | ಶ್ರೀ ಮನೋಜ್‌ಕುಮಾರ್ ತ್ರಿಪಾಠಿ ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| ಫಿರ್ಯಾಧಿದಾರರು | : | ವಲಯ ಅರಣ್ಯಾಧಿಕಾರಿ,<br>ಶಿರಾಳಕೊಪ್ಪ ವಲಯ, (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |

ಭಾದ್ಯತೆದಾರರು : ಶ್ರೀ ಬಸವರಾಜ ಬಿನ್ ಅಡಿವೆಪ್ಪ ಪೂಜರ್,
ಕೊಡಪಲ್ಲಿ. ಹಿರೇಕೆರೂರ ತಾಲ್ಲೂಕು.
(ಶ್ರೀ ರಾಮನಗೌಡ ಬಿ.ಪಾಟೀಲ್, ವಕೀಲರು ರಾಣೆಬೆನ್ನೂರು)

**ಪ್ರಸ್ತಾವನೆ:–**

ದಿ:27–08–2009ರಂದು ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ, ಸಿಬ್ಬಂದಿ ಮತ್ತು ಅರಣ್ಯ ಸಂಚಾರಿದಳ, ಶಿಕಾರಿಪುರ ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾ॥ ಉಡುಗಣಿ ಹೋಬಳಿ ನೇರಲಗಿ–ಕುಸ್ಕೂರು ರಸ್ತೆ ಆಲದ ಮರ ಚೌಡಮ್ಮನ ದೇವಸ್ಥಾನದ ಎದರು ಕಾಯುತ್ತಿರುವಾಗ ನೇರಲಗಿ ಕಡೆಯಿಂದ ಒಂದು ಬೈಕ್ ಮತ್ತು ಟಾಟಾ–207 ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ, ವಾಹನವನ್ನು ಸ್ವಲ್ಪ ದೂರ ನಿಲ್ಲಿಸಿ ಅದರಲ್ಲಿದ ಆಸಾಮಿಗಳು ವಾಹನದಿಂದ ಇಳಿದು ಕೈಗೆಸಿಗದೇ ಪರಾರಿಯಾಗಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಿ ನೋಡಿದಾಗ ವಾಹನ ಟಾಟಾ–207 ನಂ: ಕೆಎ–27–8981, (ಇಂಜಿನ್ ನಂ:4975–P-25-J-12886284 ಛಾಸ್ಸಿಸ್ ನಂಬರ್: 374463-JT-2940811) ಮತ್ತು ಹಿರೋಹೊಂಡಾ ಸಿಡಿ–100 ಬೈಕ್ ನಂ.15–ಎಲ್–924, ಮತ್ತು (ಛಾಸ್ಸಿಸ್ ನಂಬರ್: MBLHALIEE89A32948, ಇಂಜಿನ್ ನಂಬರ್ ಕಾಣಿಸುತ್ತಿಲ್ಲ) ಆಗಿದ್ದು, ಈ ವಾಹನದಲ್ಲಿ 7 ಸಾಗುವಾನಿ ನಾಟಾ ಇದ್ದು, ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಮತ್ತು ಸಾಗುವಾನಿ ನಾಟಾ ಅಳತೆ ಮಾಡಿದಾಗ 7=0.822 ಎಂ3 ಇದ್ದು, ಸದರಿ ನಾಟಾಗಳನ್ನು ಸಾಗಾಣಿಕೆ ಮಾಡಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ) ರಿಂದ (ಜಿ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಶಿರಾಳಕೊಪ್ಪ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:42/09–10ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 28–08–2009ರಂದು ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾ ವರದಿಯನ್ನು ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ, ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತಾದ ಎರಡು ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ದಿ:06–03–2010 ರಂದು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ನ್ಯಾಯಾಲಯದಲ್ಲಿ ಆದೇಶವಾಗಿರುತ್ತದೆ. ಈ ಆದೇಶ ಹೊರಡಿಸಿ 30 ದಿನಗಳೊಳಗಾಗಿ ಕೆಎ–27–8981ರ ಆರ್.ಸಿ. ಮಾಲೀಕರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ದಿ:20–03–2010 ರಂದು ಅರ್ಜಿ ಸಲ್ಲಿಸಿ ವಾಹನ ಬಿಟ್ಟುಕೊಡಲು ಕೋರಿರುತ್ತಾರೆ. ಇದರಿಂದ ಈ ಪ್ರಕರಣದಲ್ಲಿ ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೆ ದಿನಾಂಕ ನಿಗದಿಪಡಿಸಲಾಯಿತು.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಬಿ.ಸುರೇಶ್, ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ, ಇವರನ್ನು ದಿ:20–11–2010 ರಂದು ಕರೆಯಿಸಿ ಸತ್ಯಪ್ರತಿಜ್ಞೆ ಭೋದಿಸಿ, ಮುಖ್ಯವಿಚಾರಣೆ, ಸ.ಸ.ಅ. ರಿಂದ "ದಿ:28–07–2009 ರಿಂದ ನಾನು ಶಿರಾಳಕೊಪ್ಪ ವಲಯದ ಅರಣ್ಯಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:27–08–2009 ರಂದು ಬೆಳಿಗ್ಗೆ 5–00 ಗಂಟೆಗೆ ನನ್ನ ಸಿಬ್ಬಂದಿ ಹಾಗೂ ಅ.ಸಂ.ದಳ ಶಿಕಾರಿಪುರ ಇಲ್ಲಿನ ಸಿಬ್ಬಂದಿಗಳೊಂದಿಗೆ ಶಿರಾಳಕೊಪ್ಪ ನೇರಲಗಿಯಿಂದ ಕುಸ್ಕೂರುಗೆ ಹೋಗುವ ರಸ್ತೆ ಬಳಿ ಚೌಡಮ್ಮ ದೇವಸ್ಥಾನದ ಬಳಿ ಹೋಗುತ್ತಿದ್ದಾಗ ನೇರಲಗಿ ಕಡೆಯಿಂದ ಒಂದು ಬೈಕ್ ಮತ್ತು ಟಾಟಾ ಪಿಕಅಪ್ ವಾಹನ ಬರುತ್ತಿದ್ದು, ಅದನ್ನು ನಿಲ್ಲಿಸಲು ಸೂಚನೆ ನೀಡಿದಾಗ ಸಮವಸ್ತ್ರದಲ್ಲಿದ್ದ ನಮ್ಮನ್ನು ನೋಡಿ ದೂರಲ್ಲಿಯೇ ಎರಡು ವಾಹನಗಳನ್ನು ನಿಲ್ಲಿಸಿ, ಜೋಳದ ಹೊಲದ ಕಡೆ ಓಡಿ ಹೋದರು. ಹಿಡಿಯಲು ಪ್ರಯತ್ನಿಸಿದರೂ ಯಾರೂ ಸಿಗಲಿಲ್ಲ. ನಂತರ ಎರಡು ವಾಹನಗಳನ್ನು ಪರಿಶೀಲಿಸಿದಾಗ ಒಂದು ಕೆಎ–15–ಎಲ್–924 ಹಿರೋಹೊಂಡಾ ಬೈಕ್ ವಾಹನವಾಗಿತ್ತು. ಟಾಟಾ ಪಿಕ್ಅಪ್ ವಾಹನದ ಸಂಖ್ಯೆ: ಕೆಎ–27–8981 ಆಗಿದ್ದು, ಈ ವಾಹನದಲ್ಲಿ 7 ಹಸಿಯಾದ ಸಾಗುವಾನಿ ತುಂಡುಗಳಿದ್ದು, ಅವುಗಳ ಮೇಲೆ ಯಾವುದೇ ಇಲಾಖಾ ಛಾಪಾ ಇರಲಿಲ್ಲ. ಹಾಗಾಗಿ, ಇದು ಅಕ್ರಮ ಸಾಗಾಣಿಕೆ ಎಂದು ತೀರ್ಮಾನಿಸಲಾಯಿತು. ಸದರಿ ತುಂಡುಗಳನ್ನು ಅಳತೆ ಮಾಡಿ ಕ್ರಮ ಸಂಖ್ಯೆ ಕೊಟ್ಟು ಹ್ಯಾಮರ್ ಸೀಲ್ ಹೊಡೆದು ಅವುಗಳನ್ನು ಮತ್ತು 2 ವಾಹನಗಳನ್ನು ಮಹಜರ್ ಅಡಿಯಲ್ಲಿ ಅಮಾನತ್ತುಪಡಿಸಿಕೊಳ್ಳಲಾಯಿತು. ತುಂಡುಗಳು ಒಟ್ಟು ಅಳತೆ 0.822 ಎಂ3 ಆಗಿತ್ತು. ಕಛೇರಿಯನ್ನು ಸಂಪರ್ಕಿಸಿ ಎಫ್ಒಸಿ ಸಂಖ್ಯೆ ಪಡೆದು ಸ್ಥಳದಲ್ಲಿ ಪ್ರಥಮ ವರ್ತಮಾನ ತಯಾರಿಸಿ ಜಪ್ತು ವರದಿಯನ್ನು ತಯಾರಿಸಲಾಯಿತು. ನಂತರ ವಾಹನ ಹಾಗೂ ತುಂಡುಗಳೊಂದಿಗೆ ಕಛೇರಿಗೆ ವಾಪಾಸಾದೆವು. ಸ್ಥಳದಲ್ಲಿ ಮಾಡಿದ ಮಹಜರ್ನ್ನು ಈಗ ನೋಡುತ್ತಿದ್ದು, ಅದನ್ನು ನಿಶಾನೆ ಪಿ1 ಎಂದು, ಅದರಲ್ಲಿನ ನನ್ನ ಸಹಿಯನ್ನು 1ಎ ಎಂದು ಗುರ್ತಿಸಿದೆ. ಪ್ರಥಮ ವರ್ತಮಾನ ವರದಿಯನ್ನು ನಾನೇ ದಾಖಲಿಸಿದ್ದು, ಅದನ್ನು ನಿಶಾನೆ ಪಿ2 ಎಂದು, ನನ್ನ ಸಹಿಯನ್ನು 2ಎ ಎಂದು, ಜಪ್ತು ವರದಿಯನ್ನು ನಿಶಾನೆ ಪಿ3 ಎಂದು, ನನ್ನ ಸಹಿಯನ್ನು 3ಎ ಎಂದು ಗುರ್ತಿಸಿದೆ. ವಾಹನದಲ್ಲಿದ್ದ ಸಾಗುವಾನಿ ತುಂಡುಗಳನ್ನು ಸರ್ಕಾರಿ ನಾಟಾ ಸಂಗ್ರಹಾಲಯ, ಶಿಕಾರಿಪುರಕ್ಕೆ ಮತ್ತು ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಅನುಮತಿಯ ಮೇರೆಗೆ ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರಕ್ಕೆ ಸಾಗಿಸಿದೆವು. ಮುಂದಿನ ತನಿಖೆಯನ್ನು ಮುಂವುವರೆಸಿ ವಿಚಾರಣಾ ವರದಿಯನ್ನು ಸಲ್ಲಿಸಲಾಯಿತು. ವಿಚಾರಣಾ ವರದಿಯನ್ನು ನೋಡುತ್ತಿದ್ದು, ಅದನ್ನು ನಿಶಾನೆ ಪಿ4 ಎಂದು ಗುರ್ತಿಸಿದೆ. ಸದರಿ ಬೈಕ್ನ್ನು ಅಕ್ರಮ ನಾಟಾ ಸಾಗಿಸಲು ಎಸ್ಕಾರ್ಟ್ ಮಾಡಲು ಬಳಸಿದ್ದು, ಸದರಿ ವಾಹನವನ್ನು ಹಾಗೂ ಟಾಟಾ ಪಿಕ್ಅಪ್ ವಾಹನವನ್ನು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಡಿಫೆನ್ಸ್ ವಕೀಲರಿಗೆ ದಿ:20–11–2010 ರಂದು ಪಾಟಿಸವಾಲು ಮಾಡಲು ನೋಟಿಸ್ ಮೂಲಕ ತಿಳಿಸಿದರೂ ಸಹ ಗೈರು ಹಾಜರಾಗಿರುತ್ತಾರೆ. ಇದರಿಂದ ಪಾಟಿಸವಾಲು ಇಲ್ಲವೆಂದು ಪರಿಗಣಿಸಿ ಮುಂದಿನ ಹಂತಕ್ಕೆ ದಿನಾಂಕ ನಿಗದಿಪಡಿಸಲಾಯಿತು.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:19–02–2011, 05–03–2011 ರಂದು ಮತ್ತು ವಾದ ಮಂಡಿಸಲು ದಿ:02–04–2011 ದಿನಾಂಕ ನಿಗದಿಪಡಿಸಿ ಡಿಫೆನ್ಸ್ ಕಡೆಯವರಿಗೆ ತಿಳಿಸಿದರೂ ಸಹ ಡಿಫೆನ್ಸ್ ಕಡೆಯವರು ಯಾರು ವಿಚಾರಣೆಗ ಹಾಜರಾಗಿರುವುದಿಲ್ಲ. ಇದರಿಂದ ಡಿಫೆನ್ಸ್ ಕಡೆಯವರಿಗೆ ಈ ಪ್ರಕರಣದಲ್ಲಿ ಹೇಳಿಕೆ ನೀಡಲು ಮತ್ತು ವಾದ ಮಂಡಿಸಲು ಆಸಕ್ತಿ ಇಲ್ಲವೆಂದು ತೀರ್ಮಾನಿಸಿ ಮುಂದಿನ ಕ್ರಮಕ್ಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:02–04–2011ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಟಾಟಾ 207 ಕೆಎ–27–8981 ರಲ್ಲಿ 7 ಸಾಗುವಾನಿ ನಾಟಾ 0.822 ಎಂ3ನ್ನು ದಿ:27–08–2009 ರಂದು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಟಾಟಾ 207ನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಸಾಗುವಾನಿ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:27–08–2009 ರಂದು ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾ॥ ಉಡುಗಣಿ ಹೋಬಳಿ ನೇರಲಗಿ–ಕುಸ್ಕೂರು ರಸ್ತೆ ಆಲದ ಮರ ಚೌಡಮ್ಮನ ದೇವಸ್ಥಾನದ ಎದುರು ಕಾಯುತ್ತಿರುವಾಗ ನೇರಲಗಿ ಕಡೆಯಿಂದ ಎರಡು ವಾಹನ ಬರುತ್ತಿರುವುದನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ, ಅದರಲ್ಲಿ ಸಾಗುವಾನಿ ನಾಟಾ 07=0.822 ಎಂ3ನ್ನು ಅಕ್ರಮವಾಗಿ ಸಾಗಿಸಿದ ಬಗ್ಗೆ ವಾಹನ ಮತ್ತು ಸಾಗುವಾನಿ ನಾಟಾವನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಸಾಗುವಾನಿ ನಾಟಾವನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಸಾಗುವಾನಿ ನಾಟಾವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಬಸವರಾಜ ಬಿನ್ ಅಡಿವೆಪ್ಪ ಪೂಜರ್, ಕೊಡಪಲ್ಲಿ. ಹಿರೇಕೆರೂರು ತಾ॥ ಇವರು ದಿ:20–03–2010 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ: 18–04–2011 ರಂದು ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು ಎರಡು ಬಾರಿ ದಿನಾಂಕವನ್ನು ನಿಗದಿಪಡಿಸಿರುತ್ತದೆ. ಮತ್ತು ಡಿಫೆನ್ಸ್ ವಾದಕ್ಕೆ ಒಂದು ಬಾರಿ ದಿನಾಂಕವನ್ನು ನಿಗದಿಪಡಿಸಿರುತ್ತದೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:28–07–2009 ರಂದು ಟಾಟಾ 207 ನಂ: ಕೆಎ–27–8981ರಲ್ಲಿ 7 ಸಾಗುವಾನಿ ನಾಟಾ 0.822 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ, ಶಿರಾಳಕೊಪ್ಪ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಸಲ್ಲಿಸಿರುತ್ತಾರೆ. ಮತ್ತು ಈ ನ್ಯಾಯಾಲಯಕ್ಕೆ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ, ಇವರು ವಿಚಾರಣಾ ವರದಿ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು

ಮಾಡಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ:20–03–2010ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ, ಪ್ರತಿನಿಧಿಗಳಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ, ಇವರು ಜಪ್ತು ಮಾಡಿದ ಟಾಟಾ 207 ಕೆಎ–27–8981 (ಇಂಜಿನ್ ನಂ:4975-P-25-J-12886284 ಛಾಸ್ಸಿಸ್ ನಂಬರ್: 374463-JT-2940811) ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಸಾಗುವಾನಿ ನಾಟಾ 07=0.822 ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:28–05–2011 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.609 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯ**

**ಬಿ3:ಅಮೊ:ವಾಹನ:ವಿವ.17/08–09, ದಿನಾಂಕ:20–11–2010**

ಉಪಸ್ಥಿತರು : ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಣ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

ಪಿರ್ಯಾಧಿದಾರರು: ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿದಳ, ಶಿಕಾರಿಪುರ
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು)

ಭಾದ್ಯತೆದಾರರು : ಶ್ರೀ ಸಿಕಂದರ್ ಭಾಷಾ ಬಿನ್ ಯಾಸೀನ್ ಸಾಬ್, ಆಜಾದ್ ನಗರ, ಆನವಟ್ಟಿ, ಸೊರಬ ತಾಲ್ಲೂಕು.
(ಶ್ರೀ ರಾಮಸ್ವಾಮಿ ಹೆಚ್.ಎಸ್.ವಕೀಲರು, ಸಾಗರ)

**ಪ್ರಸ್ತಾವನೆ:–**

ದಿ:04–09–2008ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕು ಅಂಜನಾಪುರ ಹೋಬಳಿ ಹಾರೋಗೊಪ್ಪ ಗ್ರಾಮದ, ಹಾರೋಗೊಪ್ಪದಿಂದ ಶಿವಮೊಗ್ಗಕ್ಕೆ ಹೋಗುವ ಲೋಕೋಪಯೋಗಿ ರಸ್ತೆಯಲ್ಲಿ ಇಲಾಖಾ ವಾಹನ ಕೆಎ–14 ಜಿ–463ನಲ್ಲಿ ರಾತ್ರಿ ಗಸ್ತು ಮಾಡುತ್ತಿರುವಾಗ ಶಿಕಾರಿಪುರ ಕಡೆಯಿಂದ ಒಂದು ಬಿಳಿ ಮಾರುತಿ ಓಮಿನಿ ಬರುತ್ತಿರುವುದನ್ನು ತಡೆದು ಪರಿಶೀಲಿಸಿದಾಗ, ಓಮಿನಿ ವಾಹನದ ನಂ. ಕೆಎ–17–ಎಂ–6387, ಛಾಸ್ಸಿಸ್ ನಂ. MA3EVB11S00756862X-06, ಇಂಜಿನ್ ನಂ. F8-BIM-3582175 ಆಗಿದ್ದು, ಅದರ ಒಳಗಡೆ ಒಂದು ರೆಡಿಮೇಡ್ ಸಾಗುವಾನಿ ಮಂಚವಿರುವುದು ಕಂಡು ಬಂದಿದ್ದು, ಈ ಬಗ್ಗೆ ಓಮಿನಿ ಚಾಲಕನನ್ನು ರಹದಾರಿ ವಿಚಾರಿಸಲಾಗಿ, ಸದರಿ ಮಂಚದ ಬಾಬ್ತು ಯಾವುದೇ ರಹದಾರಿ ಇಲ್ಲವೆಂದು ತಿಳಿಸಿದನು. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಪಂಚರ ಸಮಕ್ಷಮ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ, ಆಸಾಮಿಗಳನ್ನು ಮತ್ತು ಸಾಗುವಾನಿ ಮಂಚದ ಫ್ರೇಮ್‌ಗಳು 04=0.108ಎಂ3 ಸಂಖ್ಯೆಯನ್ನು ಇಲಾಖಾಪರ ಜಪ್ತು ಮಾಡಿಕೊಂಡು ಆಸಾಮಿಗಳ ಹೆಸರು (1) ಸಾಧಿಕ್ ಬಾಷಾ ಬಿನ್ ಯಾಸೀನ್ ಸಾಬ್, 20 ವರ್ಷ (2) ಮುನೀರ್ ಬಿನ್ ಮಕ್ಬೂಲ್ ಸಾಬ್ 22 ವರ್ಷ ಇಬ್ಬರು ಆಜಾದ್ ನಗರ, ಆನವಟ್ಟಿ, ಸೊರಬ ತಾಲ್ಲೂಕಿನವರಾಗಿದ್ದು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24ಇ, 67, 71ಎ, 80 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 163, 165ರ ಪ್ರಕಾರ ಅರಣ್ಯ ಸಂಚಾರಿದಳ, ಶಿಕಾರಿಪುರ ಕಛೇರಿ ಅ.ಮೊ.ಸಂಖ್ಯೆ 37/08–09ನ್ನು ದಿ:4–9–08ರಂದು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ದಿ:05–09–2008 ರಂದು ಆದೇಶವಾಗಿದೆ.

ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರ ಪತ್ರ ಸಂಖ್ಯೆ ಸಅಸಂ.ಸದಳಶಿ.134/08–09 ದಿ:24–9–2008ರಂದು ಈ ಪ್ರಕರಣದ ವಿಚಾರಣಾ ವರದಿಯನ್ನು ಸಲ್ಲಿಸಿ ಈ ಕೆಳಗಿನಂತೆ ವಿವರಿಸಿರುತ್ತಾರೆ. ಈ ಪ್ರಕರಣದಲ್ಲಿ ದಸ್ತಗಿರಿ ಮಾಡಿದ ಆಸಾಮಿಗಳಿಂದ ಮುಚ್ಚಳಿಕೆ ಬರೆಯಿಸಿಕೊಂಡು, ರೂ12,000/–(ಹನ್ನೆರಡು ಸಾವಿರ ಮಾತ್ರ)ವನ್ನು ಭದ್ರತಾ ಠೇವಣಿಯಾಗಿ ಸರ್ಕಾರಕ್ಕೆ ಜಮಾ ಮಾಡಿಕೊಂಡು ಜಾಮೀನಿನ ಮೇಲೆ ಆಸಾಮಿಗಳನ್ನು ಬಿಡುಗಡೆ ಮಾಡಿದೆಂದು, ಅರಣ್ಯ ಉತ್ಪನ್ನ ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

"ಬಿ"ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಾದ ಶ್ರೀ ಸಿಕಂದರ್ ಭಾಷಾ ಬಿನ್ ಯಾಸೀನ್ ಸಾಬ್, ಆಜಾದ್ ನಗರ, ಆನವಟ್ಟಿ, ಸೊರಬ ತಾಲ್ಲೂಕು ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್, 71(ಬಿ)(1)ರ ಪ್ರಕಾರ ನೋಟೀಸ್‌ನ್ನು ದಿ:03–10–08ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ.

ಆರ್.ಸಿ. ಮಾಲೀಕರು ಈ ವಾಹನದ ಬಗ್ಗೆ ವಕೀಲರ ಮುಖಾಂತರ ಮನವಿ ತಯಾರಿಸಿ ಈ ನ್ಯಾಯಾಲಯಕ್ಕೆ ದಿ:04–10–08 ರಂದು ಸಲ್ಲಿಸಿರುತ್ತಾರೆ. ಇವರ ಅರ್ಜಿಯನ್ನು ದಿ:24–01–2009 ರಂದು ತಿರಸ್ಕರಿಸಿ ಈ ನ್ಯಾಯಾಲಯದಿಂದ ಆದೇಶ ಹೊರಡಿಸಿರುತ್ತದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ವೆಂಕಟೇಶ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಶಿಕಾರಿಪುರ ಉಪ ವಿಭಾಗ, ಇವರನ್ನು ದಿ:05–09–2009ರಂದು ಕರೆಸಿ ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ 2008–09ನೇ ಸಾಲಿನಲ್ಲಿ ಅರಣ್ಯ ಸಂಚಾರಿದಳ, ಶಿಕಾರಿಪುದ ಪ್ರಭಾರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದೆ. ದಿ:04–09–2008ರಂದು ನಮ್ಮ ಸಿಬ್ಬಂದಿಯೊಂದಿಗೆ ಇಲಾಖಾ ವಾಹನದಲ್ಲಿ ಹಾರೊಗೊಪ್ಪ ಗ್ರಾಮದಿಂದ ಶಿವಮೊಗ್ಗದ ಕಡೆಗೆ ಗಸ್ತು ಮಾಡುತ್ತಿರುವಾಗ ಬೆಳಿಗ್ಗೆ 6–30ರ ಸಮಯದಲ್ಲಿ ಶಿಕಾರಿಪುರ ಕಡೆಯಿಂದ ಮಾರುತಿ ಓಮ್ನಿ ಹಾರೊಗೊಪ್ಪದಿಂದ ಸುಮಾರು 1 ಕಿ.ಮೀ. ದೂರದಲ್ಲಿ ಬರುತ್ತಿರುವುದನ್ನು ಕಂಡು ಅನುಮಾನದ ಮೇರೆಗೆ ನಿಲ್ಲಿಸಲು ಸೂಚನೆ ನೀಡಿದಾಗ ಸ್ವಲ್ಪ ದೂರ ಹೋಗಿ ವಾಹನವನ್ನು ನಿಲ್ಲಿಸಿದ್ದು, ಸದರಿ ವಾಹನದಲ್ಲಿದ್ದವರ ಹೆಸರು ಸಾಧಿಕ್ ಭಾಷಾ ಮತ್ತು ಮುನಿರ್ ಎಂಬುದಾಗಿ ತಿಳಿಸಿದರು. ವಾಹನವನ್ನು ಪರಿಶೀಲಿಸಲಾಗಿ, ಅದರಲ್ಲಿ ಸಾಗುವಾನಿ ಮರದ ಪೀಠೋಪಕರಣದ ಬಿಡಿಭಾಗಗಳಿದ್ದು, ಅವುಗಳನ್ನು ಸಾಗಿಸಲು ಅವರ ಬಳಿ ಯಾವುದೇ ಪರವಾನಿಗೆ ಇರಲಿಲ್ಲ. ಸದರಿ ಸೈಜುಗಳ ಮೇಲೆ ಇಲಾಖಾ ಯಾವುದೇ ಛಾಪಾವಿರಲಿಲ್ಲ. ಇದರಿಂದ ಅವುಗಳನ್ನು ಅಕ್ರಮವಾಗಿ ಸಾಗಿಸುತ್ತಿದ್ದಾರೆಂದು, ಅವುಗಳ ಮೇಲೆ ಇಲಾಖಾ ಛಾಪಾ ಹೊಡೆದು, ಅವುಗಳನ್ನು ಮತ್ತು ವಾಹನ ಸಂಖ್ಯೆ:ಕೆಎ–17–ಎಂ–6387ನ್ನು ಅಮಾನತ್ತು ಪಡಿಸಿಕೊಂಡು ಸ್ಥಳದಲ್ಲಿ ಮಹಜರ್ ಬರೆದೆವು. ದೂರವಾಣಿ ಮೂಲಕ ಕಛೇರಿ ಸಂಪರ್ಕಿಸಿ ಅ.ಮೊ. ಸಂಖ್ಯೆಯನ್ನು ಪಡೆದೆವು. ನಂತರ ಆರೋಪಿಗಳು, ಮಾಲಿನೊಂದಿಗೆ ಕಛೇರಿಗೆ ವಾಪಾಸ್ಸಾದೆವು. ಮುಂದಿನ ತನಿಖೆಯನ್ನು ವನಪಾಲಕರಾದ ರಂಗಪ್ಪ ಅವರಿಗೆ ವಹಿಸಿದೆ. ವಾಹನವನ್ನು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಬಳಸಿದ್ದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗಿ ಕೋರಿಕೊಳ್ಳುತ್ತೇನೆ. ಆ ದಿನ ತಯಾರಿಸಿದ ಮಹಜರ್ ವರದಿಯನ್ನು ಈಗ ನೋಡುತ್ತಿದ್ದು, ಅದನ್ನು ನಿಪಿ–1 ಎಂದು ನನ್ನ ಸಹಿಯನ್ನು ನಿಪಿ–1ಎ ಎಂದು ಗುರುತಿಸಿದೆ. ವಕೀಲರ ಕೋರಿಕೆ ಮೇರೆಗೆ ಪಾಟಿಸವಾಲು ಮುಂದುಡುಲಾಯಿತು. ಆದರೆ, ಪಾಟಿಸವಾಲು ಮಾಡಲು ಡಿಫೆನ್ಸ್ ಕಡೆಯವರೆಗೆ ದಿ:31–10–2009, 21–11–2009, 16–01–2010 3 ಪ್ರತ್ಯೇಕ ದಿನಗಳಂದು ಕಾಲಾವಕಾಶ ನೀಡಿದ್ದರೂ ಸಹ ಪಾಟಿಸವಾಲು ಮಾಡಿರುವುದಿಲ್ಲ.

ಡಿಫೆನ್ಸ್ ಸಾಕ್ಷಿ ವಿಚಾರಣೆಗೆ ದಿ:31–07–2010, ರಂದು 1 ಬಾರಿ ದಿನಾಂಕ ನಿಗದಿಪಡಿಸಿದ್ದು, ವಾಹನ ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ. ಇದರಿಂದ ವಾಹನ ಮಾಲಿಕರಿಗೆ ಈ ಪ್ರಕರಣದ ವಿಚಾರಣೆಗೆ ಹಾಜರಾಗಲು ಆಸಕ್ತಿ ಇಲ್ಲವೆಂದು ಪರಿಗಣಿಸಿ ಮುಂದಿನ ಹಂತಕ್ಕೆ ದಿನಾಂಕ ನಿಗಧಿಪಡಿಸಲಾಯಿತು.

ಡಿಫೆನ್ಸ್ ಕಡೆ ವಾದಕ್ಕೆ ದಿ: 04–09–2010, 30–10–2010 ರಂದು 2 ಬಾರಿ ದಿನಾಂಕವನ್ನು ನಿಗದಿಪಡಿಸಿದರು. ಸದರಿ ದಿನಾಂಕಗಳಂದು ಡಿಫೆನ್ಸ್ ಕಡೆಯವರು ವಾದ ಮಂಡಿಸಿರುವುದಿಲ್ಲ. ಈ ಪ್ರಕರಣದ ವಸ್ತುಸ್ಥಿತಿ ನಿರ್ಧರಿಸಿ ಮುಂದಿನ ಕ್ರಮ ಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:30–10–2010ರಂದು ವಾದ ಮಂಡಿಸಿ ಈ ಪ್ರಕರಣದಲ್ಲಿ ಸಾಗುವಾನಿ ಸೈಜು ಅಕ್ರಮ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನ ಕೆಎ–17–ಎಂ–6387ನ್ನು ಮಾಲು ಸಹಿತ ಇಲಾಖಾ ಪರ ವಶಪಡಿಸಿಕೊಂಡು ಮಹಜರ್ ವರದಿಯಲ್ಲಿ ಸಾಕ್ಷಿಗಳ ಸಹಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿದ್ದಾರೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಮಾರುತಿ ಓಮ್ನಿ ನಂ:ಕೆಎ–17–ಎಂ–6387ರಲ್ಲಿ ಸಾಗುವಾನಿ ಮಂಚದ 2 ಫ್ರೇಂ ಮತ್ತು 2 ಬಾರ್ ದಿ:04–09–2008 ರಂದು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಲಾಗಿತ್ತೇ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಮಾರುತಿ ಓಮ್ನಿಯಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಸಾಗುವಾನಿಯನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ

ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ

2. ಎರಡನೇ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿನಾಂಕ: 04–09–2008 ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಇಲಾಖಾ ವಾಹನದಲ್ಲಿ ಶಿಕಾರಿಪುರ ತಾ॥ ಅಂಜಾನಪುರ ಹೋಬಳಿ ಹಾರೊಗೊಪ್ಪದಿಂದ ಶಿವಮೊಗ್ಗದ ಕಡೆಗೆ ಹೋಗುವ ರಸ್ತೆಯಲ್ಲಿ ರಾತ್ರಿ ಗಸ್ತು ಮಾಡುತ್ತಿರುವಾಗ ಒಂದು ಬಿಳಿ ಓಮ್ನಿ ಕೆಎ–17–ಎಂ–6387ರಲ್ಲಿ ಸಾಗುವಾನಿ ಸೈಜ್‌ನ್ನು ಅಕ್ರಮವಾಗಿ ಸಾಗಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಸಾಗುವಾನಿ ಸೈಜ್‌ನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಸಾಗುವಾನಿ ಸೈಜ್‌ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆ ಎಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಸಿಕಂದರ್ ಭಾಷಾ ಬಿನ್ ಯಾಸೀನ್ ಸಾಬ್, ಆಜಾದ್ ನಗರ, ಆನವಟ್ಟಿ, ಸೊರಬ ತಾಲ್ಲೂಕು. ಇವರು ದಿ:04–10–2008ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ಇವರ ಅರ್ಜಿಯಲ್ಲಿ ಮತ್ತು ಬಿ ಎಕ್ಸ್‌ಟ್ರಾಕ್ಟ್‌ನಲ್ಲಿ ನಮೂದಿಸಿದ ವಿಳಾಸದಂತೆ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1) ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ: 03–10–2008 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಆರ್.ಸಿ. ಮಾಲೀಕರು ಈ ವಾಹನವನ್ನು ಮಧ್ಯಂತರ ಸುಪರ್ಧಿಗೆ ಬಿಟ್ಟುಕೊಡಲು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯನ್ನು ದಿ:24–01–2009ರಂದು ತಿರಸ್ಕರಿಸಿ ಆದೇಶವಾಗಿದೆ. ಮತ್ತು ಡಿಫೆನ್ಸ್ ಸಾಕ್ಷಿ ಹೇಳಿಕೆಗೆ 1 ಬಾರಿ ದಿನಾಂಕ ನಿಗದಿಪಡಿಸಿರುತ್ತದೆ. ಮತ್ತು ಡಿಫೆನ್ಸ್ ವಾದಕ್ಕೆ 2 ಬಾರಿ ದಿನಾಂಕವನ್ನು ನಿಗದಿಪಡಿಸಿರುತ್ತದೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ: 04–09–2008 ರಂದು ಮಾರುತಿ ಓಮ್ನಿ ಕೆಎ–17–ಎಂ–6387ರಲ್ಲಿ ಸಾಗುವಾನಿ ಮಂಚದ 2 ಫ್ರೇಮ್ ಮತ್ತು 2 ಬಾರ್‌ಗಳನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಮತ್ತು ಈ ನ್ಯಾಯಾಲಯಕ್ಕೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ವಿಚಾರಣಾ ವರದಿಯೊಂದಿಗೆ ಸಲ್ಲಿಸಿದ್ದಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ:04–10–2008ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಈ ವಾಹನದಲ್ಲಿ ಅಕ್ರಮ ಸಾಗಾಣಿಕೆ ಮಾಡಲು ಭಾದ್ಯತೆದಾರರ ಪ್ರತಿನಿಧಿಯನ್ನು ಹೇಳಿ ಕಳುಹಿಸಿವಿಲ್ಲವೆಂದು ಮತ್ತು ಈ ಬಗ್ಗೆ ಅವರಿಗೆ ಮಾಹಿತಿ ಇಲ್ಲವೆಂಬುದಕ್ಕಾಗಲೀ, ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಅಲ್ಲದೇ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಜಪ್ತು ಮಾಡಿದ ಮಾರುತಿ ಓಮ್ನಿ ಕೆಎ–17–ಎಂ–6387ನ್ನು ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಸಾಗುವಾನಿ ಮಂಚದ 2 ಫ್ರೇಂ ಮತ್ತು 2 ಬಾರ್‌ಗಳನ್ನು 04=0.108 ಎಂ3 ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಮಾರುತಿ ಓಮ್ನಿ ಕೆಎ–17–ಎಂ–6387ನ್ನು ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ಮಂಚದ 2 ಫ್ರೇಮ್ ಮತ್ತು 2 ಬಾರ್‌ಗಳನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು

ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:20–11–2010ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

ಪಿ.ಆರ್.63

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯ**

**ಕ್ರ: ಬಿ3:ಅಮೊ:ವಾಹನ:ವಿವ:19/08–09, ದಿನಾಂಕ:26–02–2011**

| | | |
|---|---|---|
| ಉಪಸ್ಥಿತರು | :: | ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| ಪಿರ್ಯಾಧಿದಾರರು | :: | ವಲಯ ಅರಣ್ಯಾಧಿಕಾರಿ,<br>ಸಾಗರ ವಲಯ, ಸಾಗರ.<br>(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| ಆರೋಪಿಗಳು | :: | ನಾಗರಾಜ ಮತ್ತು ಶಿವಮೂರ್ತಿ |
| ಭಾದ್ಯತೆದಾರರು | :: | ಶ್ರೀ ನಾಗರಾಜ ಬಿನ್ ಹನುಮಂತಪ್ಪ, ಚಿಕ್ಕ ಕಸವಿ ಗ್ರಾಮ, ಹಿರೇಕಸವಿ–ಅಂಚೆ, ಸೊರಬ–ತಾಲ್ಲೂಕು<br>(ಶ್ರೀ ಇ. ನಾಗರಾಜ, ವಕೀಲರು, ಸಾಗರ) |

**ಪ್ರಸ್ತಾವನೆ:–**

ದಿ:11–09–2008ರಂದು ಸಾಗರ ವಲಯದ ತ್ಯಾಗರ್ತಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾ॥ ಕಸಬಾ ಹೋಬಳಿ ಹಳವಗೋಡು ಗ್ರಾಮದ ಸ.ನಂ: 12ರ ಮೈಸಾವಿ ಮನ್ನಾ ಜಂಗ್ಲಿಯಲ್ಲಿ ಗಸ್ತು ಮಾಡುತ್ತಿದ್ದಾಗ, ಮೈಸಾವಿ ಮನ್ನಾ ಜಂಗ್ಲಿಯ ಗಾಡಿ ದಾರಿಯಲ್ಲಿ ಒಂದು ಆಟೋವು ಸಾಯಂಕಾಲ 7–00ರ ಸಮಯದಲ್ಲಿ ಬರುತ್ತಿರುವುದನ್ನು ತಡೆದು ನಿಲ್ಲಿಸಿದಾಗ, ಆಟೋದಲ್ಲಿದ್ದ ಒಬ್ಬನು ಇಲಾಖೆಯವರನ್ನು ನೋಡಿ ಓಡಿ ಹೋಗಿರುತ್ತಾನೆ. ಅವನ ಹೆಸರು ಶಿವಮೂರ್ತಿ ಬಿನ್ ಗಂಗಪ್ಪ, 40 ವರ್ಷ, ಶಿರಾಳಕೊಪ್ಪ, ನೆಹರೂ ಕಾಲೋನಿ, ಶಿಕಾರಿಪುರ ತಾ॥ ಮತ್ತು ವಾಹನ ಚಾಲಕನಾದ ನಾಗರಾಜ್ ಬಿನ್ ಹನುಮಂತಪ್ಪ, 27 ವರ್ಷ, ಚಿಕ್ಕ ಕಸವಿ ಗ್ರಾಮ, ಹಿರೇಕಸವಿ ಅಂಚೆ, ಸೊರಬ ತಾಲ್ಲೂಕು ಇವರನ್ನು ಹಿಡಿದು ಆಟೋವನ್ನು ಪರಿಶೀಲಿಸಿದಾಗ ವಾಹನದೊಳಗೆ ಬೀಟೆ 5 ನಾಟಾ ಇದ್ದು, ಈ ತುಂಡುಗಳನ್ನು ಗರಗಸದಿಂದ ಕೊಯ್ತ ಮಾಡಿದ್ದಾಗಿದ್ದು, ಈ ತುಂಡುಗಳ ತುದಿ, ಬುಡದಲ್ಲಿ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ. ಚಾಲಕನ ಹತ್ತಿರ ಈ ತುಂಡುಗಳ ಸಾಗಾಣಿಕೆಗೆ ರಹದಾರಿ ಕೇಳಲಾಗಿ ರಹದಾರಿ ಇಲ್ಲವೆಂದು, ತುಂಡುಗಳಿಗೆ ಸಂಖ್ಯೆ ಕೊಟ್ಟು ಅಳತೆ 5=0.148ಎಂ3 ಇದ್ದು, ಈ ವಾಹನವು ಲಗೇಜ್ ಕ್ಯಾರಿಯರ್ ಅಪೇ ಆಗಿದ್ದು, ಕೆಎ–15–4394, ಛಾಸ್ಸಿಸ್ ನಂ: BHK-42244, ಇಂಜಿನ್ ನಂ:410552 ಆಗಿದ್ದು, ಈ ರೀತಿ ಬೀಟೆ ನಾಟಾ ರಹದಾರಿ ಇಲ್ಲದೆ ಸಾಗಾಣಿಕೆ ಮಾಡಿದ್ದು ಅಕ್ರಮವೆಂದು ಪರಿಗಣಿಸಿ, ವಾಹನ, ಅರಣ್ಯ ಉತ್ಪನ್ನ ಮತ್ತು ಅಸಾಮಿಯನ್ನು ಪ್ರಥಮ ವರ್ತಮಾನ ವರದಿ, ಮಹಜರ್‌ವರದಿ ಜಪ್ತುವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಸಾಗರ ವಲಯದ ಅ.ಮೊ.ಸಂ. 40/08–09ನ್ನು ದಾಖಲಿಸಿ, ನಂತರ ಆರೋಪಿಯನ್ನು ಜೆ.ಎಂ.ಎಫ್.ಸಿ. ಸಾಗರಕ್ಕೆ ಒಪ್ಪಿಸಿ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿರುತ್ತದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಪತ್ರ ಸಂಖ್ಯೆ: ಬಿ3:ಅಮೊ:ವಾಹನ–19/08–09 ದಿ: 26–09–2008ರಂದು ಕೋರಲಾಗಿತ್ತು. ದಿ:06–12–2008ರಂದು ಈ ವಾಹನದ ಬಿ ಪ್ರತಿಯನ್ನು ಸಾರಿಗೆ ಅಧಿಕಾರಿ, ಸಾಗರ ಇವರು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಆರ್.ಸಿ. ಮಾಲೀಕರಾದ ಶ್ರೀ ನಾಗರಾಜ ಬಿನ್ ಹನುಮಂತಪ್ಪ, ಚಿಕ್ಕ ಕಸವಿ ಗ್ರಾಮ, ಹಿರೇಕಸವಿ ಅಂಚೆ, ಸೊರಬ ತಾಲ್ಲೂಕು ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ದಿ:12–12–2008ರಂದು ಕಾರಣ ಕೇಳಿ ಪತ್ರವನ್ನು ಜಾರಿಮಾಡಿರುತ್ತದೆ.

ಈ ವಾಹನದ ಆರ್.ಸಿ. ಮಾಲೀಕರಾದ ಶ್ರೀ ನಾಗರಾಜ ಬಿನ್ ಹನುಮಂತಪ್ಪ, ಚಿಕ್ಕಕಸವಿ ಗ್ರಾಮ, ಹಿರೇಕಸವಿ ಅಂಚೆ, ಸೊರಬ ತಾಲ್ಲೂಕು ಇವರು ಮನವಿಯನ್ನು ವಕೀಲರ ಮುಖಾಂತರ ದಿ:03–10–2008 ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿ ವಾಹನವನ್ನು ಮಧ್ಯಂತರ ಅವಧಿಗೆ ಬಿಡುಗಡೆಗೆ ಕೋರಿದ ಅರ್ಜಿಯನ್ನು ದಿ:25–04–2009 ರಂದು ತಿರಸ್ಕರಿಸಿ ಆದೇಶವಾಗಿದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ನೀಲಕಂಠಪ್ಪ, ವನಪಾಲಕ, ಇವರನ್ನು ದಿ:27–11–2010 ರಂದು ಕರೆಸಿ ಸತ್ಯ ಪ್ರತಿಜ್ಞೆ ಬೋಧಿಸಿ ಸಹಾಯಕ ಸರ್ಕಾರಿ ಅಭಿಯೋಜಕರಿಂದ ಮುಖ್ಯ ವಿಚಾರಣೆ "ನಾನು 2003 ರಿಂದ ಸಾಗರ ವಲಯದ ತ್ಯಾಗರ್ತಿ ಶಾಖೆಯಲ್ಲಿ ವನಪಾಲಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೆ. ದಿ:11–09–2008ರಂದು ಸಂಜೆ 7–00 ಗಂಟೆ ನಮಗೆ ಬಂದ ಖಚಿತ ವರ್ತಮಾನದ ಮೇರೆಗೆ ನಾನು ಸಿಬ್ಬಂದಿಗಳೊಂದಿಗೆ ಪಡವಗೋಡು ಗ್ರಾಮದ ಸರ್ವೆ ನಂಬರ್ 12ರ ಮನ್ನಾ ಜಂಗಲಿಯಲ್ಲಿ ಕಾಯುತ್ತಿದ್ಧಾಗ ಜಂಗಲ್ ಕಡೆಯಿಂದ ಒಂದು ಆಟೋ ಬರುತ್ತಿದ್ದು ಅದನ್ನು ನಿಲ್ಲಿಸಲು ಸೂಚನೆ ಕೊಟ್ಟಾಗ ಅದನ್ನು ನಿಲ್ಲಿಸಿ ಅದರಲ್ಲಿದ್ದ ಇಬ್ಬರು ವ್ಯಕ್ತಿಗಳಿದ್ದು, ಒಬ್ಬನನ್ನು ಹಿಡಿದೆವು ಇನ್ನೊಬ್ಬನು ಓಡಿ ಹೋದನು. ಹಿಡಿದವನನ್ನು ವಿಚಾರಿಸಲಾಗಿ ಅವನ ಹೆಸರು ನಾಗರಾಜ ಮತ್ತು ಓಡಿ ಹೋದವನ ಹೆಸರು ಶಿವಮೂರ್ತಿ ಎಂದು ತಿಳಿಸಿದ. ವಾಹನವನ್ನು ಪರಿಶೀಲಿಸಿದಾಗ ಅದು ಲಗ್ಗೇಜ್ ಆಟೋ ಆಗಿದ್ದು

ನಂಬರ್ ಕೆಎ 15 4394 ಆಗಿತ್ತು. ವಾಹನವನ್ನು ಪರಿಶೀಲಿಸಿದಾಗ ಅದರಲ್ಲಿ 5 ಹಸಿ ಒರಟು ಕೆತ್ತನೆ ಮಾಡಿದ ಬೀಟೆ ತುಂಡುಗಳಿದ್ದವು. ಅವುಗಳ ಮೇಲೆ ಇಲಾಖಾ ಛಾಪಾ ಇರಲಿಲ್ಲ. ಮತ್ತು ಅವುಗಳನ್ನು ಸಾಗಿಸಲು ಯಾವುದೇ ಪರವಾನಿಗೆ ಇರಲಿಲ್ಲ. ಇದನ್ನು ಅಕ್ರಮ ಸಾಗಾಣಿಕೆ ಎಂದು ತೀರ್ಮಾನಿಸಿ ಅವುಗಳನ್ನು ಅಳತೆ ಮಾಡಿ ಇಲಾಖಾ ಛಾಪಾ ಹೊಡೆದು ಅವುಗಳನ್ನು ಮತ್ತು ವಾಹನವನ್ನು ಮಹಜರ್ ಮಾಡಿ ಸರ್ಕಾರಕ್ಕೆ ಅಮಾನತ್ತುಪಡಿಸಿಕೊಳ್ಳಲಾಯಿತು. ಆರೋಪಿ ಹಾಗೂ ಮಾಲಿನೊಂದಿಗೆ ಕಛೇರಿಗೆ ವಾಪಸ್ಸಾದೆವು. ಆಗ ಮಾಡಿದ ಮಹಜರ್‌ನ್ನು ಈಗ ನೋಡುತ್ತಿದ್ದು, ಅದನ್ನು ನಿಪಿ 1 ಎಂದು ನನ್ನ ಸಹಿಯನ್ನು ನಿಪಿ–1ಎ ಎಂದು ಗುರ್ತಿಸಿದೆ. ಆ ಬಗ್ಗೆ ಪ್ರಥಮ ವರ್ತಮಾನ ವರದಿಯನ್ನು ನಾನು ದಾಖಲಿಸಿದ್ದು, ಅದನ್ನು ನಿಪಿ–2 ಎಂದು, ಅದರಲ್ಲಿನ ನನ್ನ ಸಹಿಯನ್ನು 2ಎ ಎಂದು ಗುರ್ತಿಸಿದೆ. ಜಪ್ತು ಪಡಿಸಿದ ಮಾಲಿನ ಬಗ್ಗೆ ಜಪ್ತು ವರದಿ ತಯಾರಿಸಿದ್ದು ಅದನ್ನು ನಿಪಿ–3 ಎಂದು, ಅದರಲ್ಲಿನ ನನ್ನ ಸಹಿಯನ್ನು 3ಎ ಎಂದು ಗುರ್ತಿಸಿದೆ. ನಂತರ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸಲಾಯಿತು. ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಆದೇಶದ ಮೇರೆಗೆ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರಕ್ಕೆ ಸಾಗಿಸಲಾಯಿತು. ಮುಂದಿನ ತನಿಖೆಯನ್ನು ವಲಯ ಅರಣ್ಯಾಧಿಕಾರಿಗಳಿಗೆ ವಹಿಸಿರುತ್ತೇನೆ. ಸದರಿ ವಾಹನವನ್ನು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಬಳಸಿದ್ದರಿಂದ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ." ಪಾಟೀ ಸವಾಲಿಗೆ ದಿ:29–01–2011 ನಿಗಧಿಪಡಿಸಿದ್ದು ಡಿಫೆನ್ಸ ಕಡೆ ವಕೀಲರು ಪಾಟೀ ಸವಾಲು ಮಾಡಿರುವುದಿಲ್ಲ.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:05–02–2011 ರಂದು ನಿಗದಿಪಡಿಸಿದ್ದು, ಡಿಫೆನ್ಸ್ ಸಾಕ್ಷಿ ಹೇಳಿಕೆ ನೀಡಲು ಯಾರೂ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ. ಡಿಫೆನ್ಸ್ ಕಡೆಯವರಿಗೆ ದಿ:19–02–2011 ರಂದು ವಾದ ಮಂಡಿಸಲು ನಿಗದಿಪಡಿಸಿದ್ದು, ಡಿಫೆನ್ಸ್ ಕಡೆಯವರು ಯಾರೂ ಹಾಜರಗಿರುವುದಿಲ್ಲ. ಡಿಫೆನ್ಸ್ ಕಡೆಯವರಿಗೆ ಈ ಪ್ರಕರಣದಲ್ಲಿ ಹೇಳಿಕೆ ನೀಡಲು ಮತ್ತು ವಾದ ಮಂಡಿಸಲು ಆಸಕ್ತಿ ಇಲ್ಲವೆಂದು ತೀರ್ಮಾನಿಸಿ ಮುಂದಿನ ಕ್ರಮಕೈಗೊಳ್ಳಲಾಯಿತು.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಈ ಕೆಳಗಿನಂತಿದೆ.

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಲಗೇಜ್ ಆಟೋ ಕೆಎ–15–4394 ರಲ್ಲಿ ಬೀಟೆ ಸೈಜ್ 05=0.148 ಎಂ3ನ್ನು ದಿ:11–09–2008 ರಂದು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಲಾಗಿತ್ತೆ. ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಲಗೇಜ್ ಆಟೋದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ಸೈಜ್‌ನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:11–09–2008 ರಂದು ಸಾಗರ ವಲಯದ ತ್ಯಾಗರ್ತಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಖಚಿತ ವರ್ತಮಾನದ ಮೇರೆಗೆ ಸಾಗರ ತಾ॥ ಕಸಬಾ ಹೋಬಳಿ ಹಳವಗೋಡು ಗ್ರಾಮದ ಸ.ನಂ. 12ರ ಮೈಸಾವಿ ಮನ್ನಾಜಂಗ್ಲಿಯಲ್ಲಿ ಗಸ್ತು ಮಾಡುತ್ತಿರುವಾಗ ಮನ್ನಾಜಂಗ್ಲಿಯ ಗಾಡಿ ದಾರಿಯಲ್ಲಿ ಸಾಯಂಕಾಲ 7–00 ಗಂಟೆ ಸಮಯದಲ್ಲಿ ಒಂದು ಲಗೇಜ್ ಆಟೋ ಕೆಎ–15–4394ರಲ್ಲಿ ಬೀಟೆ ಸೈಜ್ 05=0.148 ಎಂ3ನ್ನು ಅಕ್ರಮವಾಗಿ ಸಾಗಿಸಿದ ಬಗ್ಗೆ ಆರೋಪಿ ಸಮೇತ ವಾಹನ ಮತ್ತು ಬೀಟೆ ಸೈಜ್‌ನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಬೀಟೆ ಸೈಜ್ ಸೈಜ್‌ನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಸೈಜ್ ಸೈಜ್‌ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ನಾಗರಾಜ್ ಬಿನ್ ಹನುಮಂತಪ್ಪ, ಚಿಕ್ಕಕಸವಿ ಗ್ರಾಮ, ಹಿರೇಕಸವಿ ಅಂಚೆ, ಸೊರಬ ತಾ॥ ಇವರು ದಿ:03–10–2008 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:12–12–2008 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಆರ್.ಸಿ. ಮಾಲೀಕರು ಈ ವಾಹನವನ್ನು ಮಧ್ಯಂತರ ಸುಪರ್ಧಿಗೆ ಬಿಟ್ಟುಕೊಡಲು ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯನ್ನು ದಿ:25–04–2009 ರಂದು ತಿರಸ್ಕರಿಸಿ ಆದೇಶವಾಗಿದೆ. ಮತ್ತು ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು 1 ಬಾರಿ ದಿನಾಂಕವನ್ನು ನಿಗದಿಪಡಿಸಿರುತ್ತದೆ. ಮತ್ತು ಡಿಫೆನ್ಸ್ ವಾದಕ್ಕೆ

1 ಬಾರಿ ದಿನಾಂಕವನ್ನು ನಿಗದಿಪಡಿಸಿರುತ್ತದೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:11–09–2008 ರಂದು ಲಗೇಜ್ ಆಟೋ ಕೆಎ–15–4394ರಲ್ಲಿ 5 ಬೀಟೆ ಸೈಜ್ 0.148ಎಂ3 ಅಕ್ರಮವಾಗಿ ಸಾಗಿಸುತ್ತಿದ್ದಾಗ, ಸಾಗರ ವಲಯದ ತ್ಯಾಗರ್ತಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಮತ್ತು ಈ ನ್ಯಾಯಾಲಯಕ್ಕೆ ವಲಯ ಅರಣ್ಯಾಧಿಕಾರಿ, ಸಾಗರ ವಲಯ ಇವರು ವಿಚಾರಣಾ ವರದಿಯೊಂದಿಗೆ ಸಲ್ಲಿಸಿದ್ದಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ:03–10–2008ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಬಾಧ್ಯತೆದಾರರಾಗಲೀ ಹಾಗೂ ಈ ಕೇಸಿನಲ್ಲಿ ವಶಪಡಿಸಿಕೊಂಡ ಲಗೇಜ್ ಆಟೋ ವಾಗಲೀ ಯಾವುದೇ ಅಪರಾಧ ಮಾಡಿಲ್ಲವೆಂದು ತಿಳಿಸಿರುತ್ತಾರೆ. ಆದರೆ, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಅಲ್ಲದೇ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ ಇವರು ಜಪ್ತು ಮಾಡಿದ ಲಗೇಜ್ ಆಟೋ ಕೆಎ–15–ಎ–4394ನ್ನು ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಬೀಟೆ ಸೈಜ್ 05=0.148 ಎಂ3 ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಲಗೇಜ್ ಆಟೋ ಕೆಎ–15–ಎ–4394ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ಸೈಜ್ 05=0.148 ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:26–02–2011 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

ಪಿ.ಆರ್.318

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ:ವಿವ:36/09–10, ದಿನಾಂಕ: 19–02–2011**

| | | |
|---|---|---|
| ಉಪಸ್ಥಿತರು | : | ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| ಪಿರ್ಯಾಧಿದಾರರು | : | ವಲಯ ಅರಣ್ಯಾಧಿಕಾರಿ,<br>ಸೊರಬ ವಲಯ (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು) |
| ಭಾದ್ಯತೆದಾರರು | : | ಶ್ರೀ ಜಾಫರ್‌ಸಾಬ್ ಬಿನ್ ಚೌಂದೂಸಾಬ್, 62 ವರ್ಷ, ದೂಗೂರು ವಾಸಿ, ಉಳುವಿ ಹೋಬಳಿ, ಸೊರಬ ತಾ॥ (ಶ್ರೀ ಟಿ.ಬಿ.ಮಂಜುನಾಥ ಶೆಟ್ಟಿ, ವಕೀಲರು ಸಾಗರ) |

**ಪ್ರಸ್ತಾವನೆ:–**

ದಿ:27–11–2009 ರಂದು ಸೊರಬ ವಲಯದ ಉಳುವಿ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಇಲಾಖಾ ವಾಹನದಲ್ಲಿ ಗಸ್ತು ತಿರುಗುತ್ತಾ, ರಾತ್ರಿ 9–00 ಗಂಟೆ ಸಮಯದಲ್ಲಿ ಕ್ಯಾಸನೂರು ಮನ್ನಾ ಜಂಗ್ಲಿಯ ಭದ್ರಾಪುರ ಹತ್ತಿರ ಸಾಗುವಾನಿ ನೆಡುತೋಪಿನಲ್ಲಿ ಕಾಯುತ್ತಿರುವಾಗ ಬರಗಿ ಗ್ರಾಮದಿಂದ ಭದ್ರಾಪುರಕ್ಕೆ ಬರುವ ಟಾರ್ ರಸ್ತೆಯಲ್ಲಿ ಒಂದು ಕ್ಯಾಂಟರ್ ನಂ.ಕೆಎ–15–ಎ–786ವು ಕೆ.ಎಸ್.ಎಫ್.ಐ.ಸಿ. ಅಕೇಶಿಯ ನೆಡುತೋಪು ಮತ್ತು ಸಾಗುವಾನಿ ನೆಡುತೋಪಿನ ಹತ್ತಿರ ರಾತ್ರಿ 10–15ಕ್ಕೆ ಬಂದು ನಿಂತಿತ್ತು. ಇಲಾಖೆಯವರು ಮರೆಯಲ್ಲಿ ನಿಂತು ನೋಡುತ್ತಿರುವಾಗ ವಾಹನದಿಂದ 5–6 ಜನ ಇಳಿದು, ನೆಡುತೋಪಿಗೆ ಹೋಗಿ ತುಂಡುಗಳನ್ನು ತಂದು, ಕ್ಯಾಂಟರಿನೊಳಗೆ ಹಾಕುತ್ತಿರುವಾಗ ಕೂಡಲೇ ಇಲಾಖೆಯವರು ವಾಹನದ ಹತ್ತಿರ ಹೋಗಿ ಸುತ್ತುವರಿದು ಆಸಾಮಿಗಳನ್ನು ಹಿಡಿಯಲು ಪ್ರಯತ್ನಿಸಿದರು. ಕೈಗೆ ಸಿಗದೇ ಅಕೇಶಿಯ ನೆಡುತೋಪಿನಲ್ಲಿ ಓಡಿ ತಲೆಮರೆಸಿಕೊಂಡರು. ನಂತರ ವಾಹನದ ಹತ್ತಿರ ಬಂದು ವಾಹನವನ್ನು ಪರಿಶೀಲಿಸಿ ನೋಡಲಾಗಿ ವಾಹನದೊಳಗಡೆ ಗರಗಸದಿಂದ ಕೊಯ್ತು ಮಾಡಿದ ಸಾಗುವಾನಿ 10 ತುಂಡುಗಳಿದ್ದವು. ಅವುಗಳನ್ನು ಅಳತೆ ಮಾಡಲಾಗಿ 0.324 ಎಂ3 ಪ್ರಮಾಣವಿದ್ದು, ಅವುಗಳಿಗೆ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ. ಇದು

ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ,ವಾಹನ, ಸಾಗುವಾನಿ ತುಂಡುಗಳನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಸೊರಬ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:72/09–10ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ಈ ಪ್ರಕರಣದಲ್ಲಿ ವಲಯ ಅರಣ್ಯಾಧಿಕಾರಿ, ಸೊರಬ ವಲಯ, ಇವರು ಈ ನ್ಯಾಯಾಲಯಕ್ಕೆ ವಿಚಾರಣಾ ವರದಿ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದ ಪತ್ರ ಸಂ:ಬಿ3.ಅಮೊ.ವಾಹನ.ವಿವ.36/09–10 ದಿ:01–12–09 ರಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಕೋರಿದೆ. ಅದರಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರ ಕಛೇರಿ ಪತ್ರ ಸಂ:ಸಪ್ರಾಸಾಅ.ಸಾಗರ.ಆರ್‌ಜಿಎನ್.09/10ದಿ:29–12–2009 ರಲ್ಲಿ ಈ ವಾಹನ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿರುವಂತೆ ಆರ್.ಸಿ. ಮಾಲೀಕರಾದ ಶ್ರೀ ಜಾಫರ್‌ಸಾಬ್ ಬಿನ್ ಚಾಂದೂಸಾಬ್, 62 ವರ್ಷ, ದೂಗೂರು ವಾಸಿ, ಉಳುವಿ ಹೋಬಳಿ, ಸೊರಬ ತಾ. ಇವರಿಗೆ ದಿ:02–01–2010 ರಂದು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71 ಬಿ(1)ರ ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ ವಾಹನದ ದಾಖಲೆ ಸಲ್ಲಿಸಲು ನೋಟಿಸ್‌ನ್ನು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ.

ಆರ್.ಸಿ. ಮಾಲೀಕರು ವಕೀಲರ ಮುಖಾಂತರ ಮನವಿ ತಯಾರಿಸಿ, ಕ್ಲೇಮು ಅರ್ಜಿಯನ್ನು ಈ ನ್ಯಾಯಾಲಯಕ್ಕೆ ದಿ:18–12–2009 ರಂದು ಸಲ್ಲಿಸಿ, ವಾಹನ ಮಧ್ಯಂತರ ಅವಧಿಗೆ ಬಿಡುಗಡೆಗೆ ಕೋರಿರುತ್ತಾರೆ. ನಂತರ ಈ ಪ್ರಕರಣದ ವಿಚಾರಣೆ ಸಮಯದಲ್ಲಿ ಮಧ್ಯಂತರ ಅವಧಿಗೆ ಬಿಡುಗಡೆಗೆ ಕೋರಿದ ಅರ್ಜಿಗೆ ಆದೇಶ ಮಡುವುದು ಬೇಡ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಬಹುದೆಂದು ವಾದಿ ಕಡೆಯ ವಕೀಲರು ಕೋರಿದ ಮೇರೆಗೆ ಸಾಕ್ಷಿಯ ಹೇಳಿಕೆಯ ಪಡೆಯಲು ದಿನಾಂಕ ನಿಗದಿಪಡಿಸಲಾಗಿದೆ.

ಶ್ರೀ ಚಂದ್ರಪ್ಪ ಭೋಗಾವಿ, ವನಪಾಲಕ, ಸೊರಬ ವಲಯ, (PW1) ಇವರನ್ನು ದಿ:21–08–2010 ರಂದು ಕರೆಯಿಸಿ ಸತ್ಯಪ್ರತಿಜ್ಞೆ ಬೋಧಿಸಿ ಹೇಳಿಕೆಯಂತೆ ಮುಖ್ಯ ವಿಚಾರಣೆಯನ್ನು ಸ.ಸ.ಅ. ರವರಿಂದ "ನಾನು 2007 ರಿಂದ 2009ರವರೆಗೆ ಸೊರಬ ವಲಯದ ಉಳುವಿ ಶಾಖೆಯಲ್ಲಿ ವನಪಾಲಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೆ. ದಿ:27–11–2009ರಂದು ನಾನು ಮತ್ತು ವನಪಾಲಕ ಚನ್ನಳ್ಳಿ, ನೆಹರು, ಬೀಟ್ ಗಾರ್ಡ್ ಜಗನ್ನಾಥ್ ಮತ್ತು ಅಬ್ರಾಹಂ ಕೋತಾ ಅವರೊಂದಿಗೆ ಇಲಾಖಾ ವಾಹನದಲ್ಲಿ ಭದ್ರಾಪುರದ ಸಾಗುವಾನಿ ನೆಡುತೋಪಿನ ಸಮೀಪ ರಾತ್ರಿ ಸುಮಾರು 9–00ಗಂಟೆ ಸಮಯದಲ್ಲಿ ಗಸ್ತು ಮಾಡುತ್ತಿರುವಾಗ ಸುಮಾರು 10 ಗಂಟೆ ಸಮಯದಲ್ಲಿ ಬರಗಿ ಕಡೆಯಿಂದ ಒಂದು ಕ್ಯಾಂಟರ್ ವಾಹನ ನೆಡುತೋಪಿನ ಸಮೀಪ ರಸ್ತೆಯಲ್ಲಿ ನಿಲ್ಲಿಸಲಾಯಿತು. ನಾವು ಅಲ್ಲಿಗೆ ಬಂದು ಗಮನಿಸಲಾಗಿ ಸದರಿ ವಾಹನದಿಂದ 5–6ಜನ ನೆಡುತೋಪಿನ ಒಳಗೆ ಹೋಗಿ ನೆಡುತೋಪಿನಿಂದ ತುಂಡುಗಳನ್ನು ತಂದು ಕ್ಯಾಂಟರ್‌ಗೆ ತುಂಬುತ್ತಿದ್ದರು. ನಾವು ಹತ್ತಿರದ ಬಿದಿರು ಮಟ್ಟಿ ಬಳಿ ಮರೆಯಾಗಿ ನಿಂತು ನೋಡಿದಾಗ ಅವರು ಪುನಃ ತುಂಡುಗಳನ್ನು ತಂದು ಕ್ಯಾಂಟರ್‌ಗೆ ತುಂಬುತ್ತಿದ್ದಾಗ ನಾವು ಅವರನ್ನು ಹಿಡಿಯಲು ಹೋದಾಗ ಅವರು ಓಡಿಹೋದರು. ಅವರನ್ನು ಬೆನ್ನಟ್ಟಿದರೂ ಸಿಕ್ಕಲಿಲ್ಲ. ನಂತರ ವಾಹನವನ್ನು ಪರಿಶೀಲಿಸಲಾಗಿ ನೊಂದಣಿ ಸಂಖ್ಯೆ ಕೆಎ–15–ಎ–786 ಆಗಿತ್ತು, ಅದರಲ್ಲಿ 10 ಸಾಗುವಾನಿ ತುಂಡುಗಳನ್ನು ತುಂಬಲಾಗಿತ್ತು. ಸದರಿ ತುಂಡುಗಳನ್ನು ಪರಿಶೀಲಿಸಲಾಗಿ ಅವುಗಳ ತುದಿ, ಬುಡವನ್ನು ಗರಗಸದಿಂದ ಕೊಯ್ದು ಮಾಡಿದ್ದು, ಅವುಗಳ ಮೇಲೆ ಇಲಾಖಾ ಯಾವುದೇ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಅಳತೆ ಮಾಡಿ ಕ್ರಮ ಸಂಖ್ಯೆ ಕೊಟ್ಟು, ಇಲಾಖಾ ಛಾಪಾ ಹೊಡೆದು, ತುಂಡುಗಳನ್ನು ಮತ್ತು ವಾಹನವನ್ನು ವಶಪಡಿಸಿಕೊಂಡು ಮಹಜರ್ ಬರೆದೆವು. ಆಗ ಮಾಡಿದ ಮಹಜರ್‌ನ್ನು ಈಗ ನೋಡುತ್ತಿದ್ದು, ಅದನ್ನು ನಿಪಿ 1 ಎಂದು ನನ್ನ ಸಹಿಯನ್ನು ನಿಪಿ–1ಎ ಎಂದು, ಆ ಬಗ್ಗೆ ಪ್ರಥಮ ವರ್ತಮಾನ ವರದಿಯನ್ನು ನಾನು ದಾಖಲಿಸಿದ್ದು, ಅದನ್ನು ನಿಪಿ–2 ಎಂದು, ಅದರಲ್ಲಿನ ನನ್ನ ಸಹಿಯನ್ನು 2ಎ ಎಂದು ಗುರ್ತಿಸಿದೆ. ನಂತರ ಅಮಾನತ್ತುಪಡಿಸಿದ ವಸ್ತುಗಳೊಂದಿಗೆ ಕಛೇರಿಗೆ ಬಂದೆವು. ಜಪ್ತು ಪಡಿಸಿದ ಮಾಲಿನ ಬಗ್ಗೆ ಜಪ್ತು ವರದಿ ತಯಾರಿಸಿದ್ದು ಅದನ್ನು ನಿಪಿ–3 ಎಂದು, ಅದರಲ್ಲಿನ ನನ್ನ ಸಹಿಯನ್ನು 3ಎ ಎಂದು ಗುರ್ತಿಸಿದೆ. ವಶಪಡಿಸಿಕೊಂಡ ತುಂಡುಗಳನ್ನು ಕಡಿದ ಬುಡ ಸಾಗುವಾನಿ ನೆಡುತೋಪಿನಲ್ಲಿದ್ದು, ಅವುಗಳನ್ನು ಗುರುತಿಸಿ, ಅವುಗಳಿಗೆ ಛಾಪಾ ಹೊಡೆದು ಮಹಜರ್ ಮಾಡಲಾಯಿತು. ಸದರಿ ಮಹಜರ್‌ಗೆ ನನ್ನ ಸಹಿ ಇದೆ. ಸದರಿ ಮಹಜರ್‌ನ್ನು ನಿಪಿ4 ಎಂದು, ನನ್ನ ಸಹಿಯನ್ನು ನಿಪಿ 4 ಎ ಎಂದು ಗುರ್ತಿಸಿದೆ. ನಂತರ ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಆದೇಶದ ಮೇರೆಗೆ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರಕ್ಕೆ ಸಾಗಿಸಲಾಯಿತು. ಸದರಿ ವಾಹನವನ್ನು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಬಳಸಿದ್ದರಿಂದ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ".

ಪಾಟಿ ಸವಾಲು–ಟಿ.ಬಿ.ಎಂ, ವಕೀಲರಿಂದ – ಆ ದಿನ ವಶಪಡಿಸಿಕೊಂಡ ತುಂಡುಗಳ ಬುಡ ದೂಗೂರು ಸ.ನಂ: 100ರಲ್ಲಿದ್ದು, ಆ ಬಗ್ಗೆ ಬುಡ ಮಹಜರ್ ಮಾರನೇ ದಿನ ಮಾಡಿರುತ್ತೇನೆ. ನಾನು, ವಅಅ ಮತ್ತು ಪಂಚರು ಸ್ಥಳಕ್ಕೆ ಹೋಗಿರುತ್ತೇವೆ. 5 ಬುಡವನ್ನು ಜಪ್ತುಮಾಡಲಾಗಿದೆ. ಸದರಿ ಬುಡಕ್ಕೂ, ನಾವು ವಶಪಡಿಸಿಕೊಂಡ ತುಂಡುಗಳಿಗೂ ತಾಳೆಯಾಗುತ್ತದೆಯೆಂದು ವಅಅ ಗಳಿಂದ ಪರಿಶೀಲನೆ ಮಾಡಿಸಿರುತ್ತೇವೆ. ಬುಡ ಮಹಜರ್ ಮತ್ತು ವಅಅಗಳ ಸರ್ಟಿಫಿಕೇಟ್ ಮೊದಲಾದ ದಾಖಲೆಗಳನ್ನು ಉಅ.ಸಂ.ಗಳ ಕಛೇರಿಗೆ ಕಳುಹಿಸಿರುತ್ತೇನೆ. ದೂಗೂರು ನೂರಾರು ಮನೆಗಳಿರುವ ಒಂದು ಗ್ರಾಮ ಎಂದರೆ ನಿಜ. ನಾವು ಹಿಡಿದ ವಾಹನವನ್ನು ಗ್ರಾಮಸ್ಥರು ಯಾರೂ ನೋಡಿಲ್ಲವೆಂದರೆ ನಿಜ. ಕಾರಣ ಆಗ ರಾತ್ರಿಯಾಗಿತ್ತು. ರಾತ್ರಿಯಾಗಿದ್ದರಿಂದ ಯಾರೂ ಪಂಚರನ್ನು ಕರೆಸಲಿಲ್ಲ. ಮಹಜರನ್ನು ಸ್ಥಳದಲ್ಲಿಯೇ ನಾನೇ ಟಾರ್ಚ್ ಬೆಳಕಿನ ಸಹಾಯದಿಂದ ಬರೆದಿರುತ್ತೇನೆ. ಆ ದಿನ ಓಡಿಹೋದ 5 ಜನ

ಅಸಾಮಿಗಳು ಯುವಕರಾಗಿದ್ದು, ಗಟ್ಟಿಮುಟ್ಟಾಗಿದ್ದರು. ಅವರನ್ನು ಈ ಮೊದಲು ನೋಡಿರಲಿಲ್ಲ. ಸದರಿ ಅಸಾಮಿಗಳು ಯಾವ ಊರಿನವರೆಂದು ನನಗೆ ತಿಳಿದಿಲ್ಲ. ಈವರೆವಿಗೂ ಅವರನ್ನು ನಾನು ನೋಡಿರುವುದಿಲ್ಲ. ಅರ್ಜಿದಾರರಾದ ಜಾಫರ್ ಸಾಬ್ ನನಗೆ ಪರಿಚಯವಿದ್ದು, ಅವರು ಉಳುವಿ ಗ್ರಾಮದ ವಾಸಿಯಾಗಿರುತ್ತಾರೆ. ನನಗೆ ತಿಳಿದಿರುವಂತೆ ಜಾಫರ್ ಸಾಬ್ ರಾಗಲೀ ಅಥವಾ ಅವರ ವಾಹನವಾಗಲೀ ಈ ಹಿಂದೆ ಯಾವುದೇ ರೀತಿಯ ಅರಣ್ಯ ಅಪರಾಧದಲ್ಲಿ ಭಾಗಿಯಾಗಿರುವುದಿಲ್ಲ. ಜಾಫರ್ ಸಾಬ್ ಮುಸ್ಲೀಂ ಜನಾಂಗಕ್ಕೆ ಸೇರಿದ್ದಾರೆಂದರೆ ನಿಜ. ಜಾವಗಲ್ ಬಾಬ್ ರವರು ಈ ಸಮಾಜಕ್ಕೆ ಮುಖ್ಯಸ್ಥರೆಂಬುದು ನನಗೆ ತಿಳಿದಿಲ್ಲ. ದಿ:26–11–2009ರಂದು ಜಾವಗಲ್ ಬಾಬಾ ರವರು ಜಾವಗಲ್‌ನಲ್ಲಿ ಮೃತಪಟ್ಟಿರುತ್ತಾರೆಂಬ ವಿಷಯ ನನಗೆ ತಿಳಿದಿಲ್ಲ. ಅರ್ಜಿದಾರರು ಮತ್ತು ಅವರ ಕುಟುಂಬದವರೂ ಸೇರಿ ಉಳುವಿ ಗ್ರಾಮದ ಸುಮಾರು 20–25 ಜನರು 3 ಓಮ್ನಿ ವಾಹನದಲ್ಲಿ ಜಾವಗಲ್‌ಗೆ ಬಾಬಾರವರ ಅಂತ್ಯಸಂಸ್ಕಾರಕ್ಕೆ ಹೋಗಿದ್ದರೆಂಬುದು ನನಗೆ ತಿಳಿದಿಲ್ಲ. ಅರ್ಜಿದಾರರ ಬಳಿ ಮುನ್ನಾ ಎಂಬುವ 7–8 ದಿನಗಳಿಂದ ತಾತ್ಕಾಲಿಕ ಚಾಲಕನಾಗಿ ಕಲ್ಲನ್ನು ಸಾಗಾಣೆ ಮಾಡಲು ಬರುತ್ತಿದ್ದನೆಂದರೆ ನನಗೆ ಗೊತ್ತಿಲ್ಲ. ದಿ: 26–11–09ರಂದು ಅರ್ಜಿದಾರರು ಅವರ ಮನೆಯ ಮುಂದೆ ಸದರಿ ವಾಹನವನ್ನು ನಿಲ್ಲಿಸಿ ಜಾವಗಲ್‌ಗೆ ಹೋಗಿದ್ದರೆಂಬುದು ನನಗೆ ಗೊತ್ತಿಲ್ಲ. ಬಾಬಾ ಅವರ ಅಂತ್ಯಸಂಸ್ಕಾರಕ್ಕೆ ಬಟ್ಟೆ ಬರುವುದು 2 ದಿನ ತಡವಾಗಿದ್ದರಿಂದ 28–11–09ರಂದು ಅಂತ್ಯಸಂಸ್ಕಾರವಾಗಿದ್ದು ಅಲ್ಲಿಯವರೆವಿಗೂ ಅರ್ಜಿದಾರರು ಅಲ್ಲಿಯೇ ತಂಗಿದ್ದರೆಂದರೆ ನನಗೆ ತಿಳಿದಿಲ್ಲ. ಅರ್ಜಿದಾರರು ದಿ:29–11–2009ರಂದು ಬೆಳಿಗ್ಗೆ ಉಳುವಿಗೆ ಬಂದು ನೋಡಿದಾಗ ವಾಹನ ಕಾಣೆಯಾಗಿತ್ತು ಎಂದರೆ ನನಗೆ ಗೊತ್ತಿಲ್ಲ. ಅರ್ಜಿದಾರರು ಮತ್ತು ಅವರ ಕುಟುಂಬದ ಅನುಪಸ್ಥಿತಿಯಲ್ಲಿ ವಾಹನವನ್ನು ಯಾರೋ ಕಳ್ಳರು ದುರುಪಯೋಗ ಪಡಿಸಿಕೊಂಡಿದ್ದಾರೆಂಬುದು ನನಗೆ ಗೊತ್ತಿಲ್ಲ. ನಂತರ ಅವರು ಠಾಣೆಗೆ ದೂರು ದಾಖಲಿಸಲು ಹೋಗಿದ್ದರೆಂಬುದು ನನಗೆ ಗೊತ್ತಿಲ್ಲ. ಅರ್ಜಿದಾರರು ದೂರು ನೀಡಲು ಹೋದಾಗ ಅರಣ್ಯ ಇಲಾಖೆಯವರು ಸದರಿ ವಾಹನವನ್ನು ಜಪ್ತು ಮಾಡಿ ಆ ಬಗ್ಗೆ ದೂರು ಕೊಟ್ಟಿರುವ ವಿಷಯ ಅವರಿಗೆ ಗೊತ್ತಾಯಿತೆಂದರೆ ನನಗೆ ಗೊತ್ತಿಲ್ಲ. ಸದರಿ ವಾಹನವನ್ನು ಹಿಡಿದ ದಿನವೇ ಆ ಬಗ್ಗೆ ಠಾಣೆಯಲ್ಲಿ ದೂರು ದಾಖಲಿಸಿರುತ್ತೇವೆ.

ಶ್ರೀ ನಿಸಾರ್ ಬಿನ್ ಗೌಸ್ ಸಾಬ್, ವ್ಯವಸಾಯಗಾರ, 52 ವರ್ಷ, (DW1) ಇವರನ್ನು ದಿ:27–11–2010 ರಂದು ಕರೆಯಿಸಿ ಸತ್ಯಪ್ರತಿಜ್ಞೆ ಬೋಧಿಸಿ ಹೇಳಿಕೆಯಂತೆ ಮುಖ್ಯ ವಿಚಾರಣೆ ಟಿ.ಬಿ.ಎಂ. ವಕೀಲರಿಂದ "ನಾನು ಉಳವಿಯ ಜಾಮೀಯ ಮಸೀದಿ ಸಮಿತಿಯ ಸದಸ್ಯನಾಗಿರುತ್ತೇನೆ. ನಮ್ಮ ಗುರುಗಳು ಜಾವಗಲ್‌ನಲ್ಲಿ ಇರುತ್ತಾರೆ. ಅವರು ಬಕ್ರೀದ್ ಹಬ್ಬದ 2 ದಿನ ಮೊದಲು ಮೃತರಾಗಿರುತ್ತಾರೆ. ನಾವು 3 ಒಮ್ನಿಗಳಲ್ಲಿ ಜನರ ಜೊತೆಗೆ ಜಾಫರ್ ಸಾಬ್ ಕುಟುಂಬ ಸಮೇತ ಹೋಗಿದ್ದೆವು. ಅಂತ್ಯ ಸಂಸ್ಕಾರ ಮುಗಿಸಿಕೊಂಡು ಭಾನುವಾರ ಬೆಳಿಗ್ಗೆ ಉಳವಿಗೆ ಬಂದೆವು. ಬಂದಾಗ ಮನೆ ಮುಂದೆ ನಿಲ್ಲಿಸಿದ್ದ ಅವರ ಲಾರಿ ಕಳುವಾದ ವಿಷಯ ತಿಳಿಯಿತು. ಈ ಬಗ್ಗೆ ನಮ್ಮ ಸಮಿತಿಯಿಂದ ಜಾಫರ್ ಸಾಬ್ ನಮ್ಮ ಅಧ್ಯಕ್ಷರು ನೀಡಿದ ಪತ್ರ ಇದ್ದು ಅದರಲ್ಲಿ ನನ್ನ ಸಹಿ ಇರುತ್ತದೆ. ಅದರ ಜೆರಾಕ್ಸ್ ಪ್ರತಿಯನ್ನು ಈಗ ನೋಡುತ್ತಿದ್ದೇನೆ. ಜಾಫರ್ ಸಾಬ್ ಇವರು ಯಾವುದೇ ಅಕ್ರಮದಲ್ಲಿ ಭಾಗಿಯಾಗಿರುವುದು ನನ್ನ ಗಮನಕ್ಕೆ ಬಂದಿರುವುದಿಲ್ಲ".

ಪಾಟೀಸವಾಲು : ಸಸಅ ರವರಿಂದ ಅವರು ವಾಹನಕ್ಕೆ ತನ್ನಮಗ ಮೊದಲು ಚಾಲನೆ ಮಾಡುತ್ತಿದ್ದ ನಂತರ ಹಂಗಾಮಿಯಾಗಿ ಮುನ್ನನನ್ನು ಚಾಲಕನಾಗಿ ತೆಗೆದುಕೊಂಡಿದ್ದ. ಈ ಘಟನೆ ನಡೆದಾಗ ಸಹ ಮುನ್ನನೇ ಚಾಲಕನಾಗಿದ್ದ. ಬಾಡಿಗೆ ವಿಚಾರವನ್ನು ಜಾಫರ್ ಸಾಬ್ ಮಾತನಾಡುತಿದ್ದು ಮುನ್ನ ಚಾಲಕನಾಗಿದ್ದು, ಮುನ್ನನಿಗೆ ಉಳಿವಿಯಲ್ಲಿ ಸ್ವಂತ ಮನೆಯಿಲ್ಲ. ಚಾಲನೆ ಮಾಡುತ್ತಿದ್ದ ವಾಹನದಲ್ಲಿ ಮಲಗುತ್ತಿದ್ದ. ಜಾವಗಲ್‌ಗೆ ಹೋಗುವಾಗ ಮುನ್ನನಿಗೆ ಮನೆ ಕಡೆ ನೋಡಿಕೊಳ್ಳಲು ಸೂಚಿಸಿದ್ದರು. ಅವನು ಲಾರಿಯಲ್ಲಿಯೇ ಮಲಗುತ್ತಿದ್ದ. ಈ ಘಟನೆ ನಂತರ ಮುನ್ನ ಸಿಕ್ಕಿರುವುದಿಲ್ಲ. ಈ ಘಟನೆ ನಂತರ ಮುನ್ನ ಉಳವಿಯಲ್ಲಿ ನಾನು ಅವನನ್ನು ನೋಡಿರುವುದಿಲ್ಲ. ಡ್ರೈವರ್‌ಗೆ ಒಂದು ಕೀಯನ್ನು ಕೊಟ್ಟಿರುತ್ತಾರೆ. ವಾಹನವನ್ನು ಜಾಫರ್‌ಸಾಬ್ ಅಕ್ರಮ ಚಟುವಟಿಕೆಗೆ ಉಪಯೋಗಿಸಿರುವುದಿಲ್ಲ. ಈ ವಾಹನವನ್ನು ಬಿಡುಗಡೆಗೊಳಿಸಿಕೊಳ್ಳ ಬೇಕಾಗಿ ಜಾಫರ್‌ಸಾಬ್ ಪರವಾಗಿ ಸುಳ್ಳು ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ.

ಶ್ರೀ ಜಾಫರ್ ಸಾಬ್ ಬಿನ್ ಚಾಂದೂ ಸಾಬ್, ಕೂಲಿ ಕೆಲಸ, 63 ವರ್ಷ, (DW2) ಇವರನ್ನು ದಿ:27–11–2010 ರಂದು ಕರೆಯಿಸಿ ಸತ್ಯ ಪ್ರತಿಜ್ಞೆ ಬೋಧಿಸಿ ಮುಖ್ಯ ವಿಚಾರಣೆ ಟಿ.ಬಿ.ಎಂ. ವಕೀಲರಿಂದ "ನಾನು ದೂಗೂರು ಬಡಾವಣೆಯಲ್ಲಿ ವಾಸವಾಗಿರುತ್ತೇನೆ. ಕೆಎ–15–ಎ–786 ಲಾರಿಯ ಮಾಲೀಕನಾಗಿರುತ್ತೇನೆ. ಲಾರಿಯನ್ನು ಈ ಘಟನೆ ನಡೆಯುವ 6 ತಿಂಗಳ ಮೊದಲು ಖರೀದಿಸಿರುತ್ತೇನೆ. ಕ್ವಾರೆಯಿಂದ ಕಲ್ಲು ಸಾಗಿಸಲು ಸದರಿ ಲಾರಿಯನ್ನು ಉಪಯೋಗಿಸುತ್ತಿದ್ದೆನು. ಮೊದಲು 3 ತಿಂಗಳು ನನ್ನ ಮಗ ಅದನ್ನು ಓಡಿಸುತ್ತಿದ್ದ. ನಂತರ ಘಟನೆ ನಡೆಯುವ 15 ದಿನಗಳ ಮೊದಲು ಹಂಗಾಮಿಯಾಗಿ ಮುನ್ನಾ ಎಂಬ ಡ್ರೈವರ್‌ನನ್ನು ನಡೆಸುತ್ತಿದ್ದರು. ಭದ್ರಾವತಿ ಕಡೆಯ ಮುನ್ನಾ ಎಂಬುವವನು ಚಾಲಕನಾಗಿದ್ದನು. ಮನೆಯ ಮುಂದೆ ರಸ್ತೆ ಪಕ್ಕದಲ್ಲಿ ಪ್ರತಿ ದಿನ ಲಾರಿಯನ್ನು ನಿಲ್ಲಿಸುತ್ತಿದ್ದೆನು. ಟ್ರಿಪ್ ಇದ್ದಾಗ ಡ್ರೈವರ್‌ನನ್ನು ಕರೆಸುತ್ತಿದ್ದೆನು. ಈ ಘಟನೆ ಮೊದಲು ನಾನು ಯಾವುದೇ ಕ್ರಿಮಿನಲ್ಲಿ ಕೇಸ್ ಅಥವಾ ಯಾವುದೇ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿರುವುದಿಲ್ಲ. ನಮ್ಮ ಸಮಾಜದ ಗುರುಗಳು ಜಾವಗಲ್‌ನಲ್ಲಿ ವಾಸವಾಗಿದ್ದರು. ಕಳೆದ ವರ್ಷ 26–11–2009ರಂದು ತೀರಿ ಹೋದರೆಂದು ಸಂಜೆ 4 ಗಂಟೆಗೆ ಸುದ್ದಿ ತಿಳಿದಿರುತ್ತದೆ. ಉಳವಿಯಲ್ಲಿ ನಮ್ಮ ಸಮಾಜದ ಮಸೀದಿ ಇರುತ್ತದೆ. ಉಳವಿಯಿಂದ ಒಮ್ನಿ ಮಾಡಿಕೊಂಡು ಮಸೀದಿಯಿಂದ ಜಾವಗಲ್‌ಗೆ ಹೋಗಿರುತ್ತವೆ. ರಾತ್ರಿ ಹೊರಟು ಬೆಳಿಗ್ಗೆ ಅಲ್ಲಿ ತಲುಪಿರುತ್ತೇವೆ. 28–11–2009ರಂದು ಸದರಿ ಶವ ಸಂಸ್ಕಾರ ಮಾಡಲಾಗಿರುತ್ತದೆ. ಅಲ್ಲಿಂದ ಆ ದಿನ ಹೊರಟು ಮಾರನೇ ದಿನ ಬೆಳಿಗ್ಗೆ (29–11–2009) ಹಿಂದಿರುಗಿರುತ್ತೇವೆ. ಊರಿಗೆ ಬಂದು ನೋಡಿದಾಗ ನಮ್ಮ ಲಾರಿ ಇರಲಿಲ್ಲ. ಠಾಣೆಗೆ ದೂರು ಕೊಡಲು ಹೋದಾಗ ಲಾರಿಯನ್ನು ಅರಣ್ಯ ಇಲಾಖೆಯವರು ಜಪ್ತು ಮಾಡಿದ ವಿಷಯ ತಿಳಿಯಿತು. ಅ ನಂತರ ಅರಣ್ಯ ಇಲಾಖೆಗೆ ಬಂದು ಅರ್ಜಿಯನ್ನು ಹಾಕಲಾಯಿತು. ನಾನು ಮಸೀದಿಗೆ ಹೋಗಿ ಬಂದ ಕುರಿತು ಮಸೀದಿಯವರು ನೀಡಿದ ಪತ್ರ ನನ್ನ ಹತ್ತಿರ ಇದೆ. ಅದರ ಅಸಲು ಪ್ರತಿ ಕಳೆದಿದ್ದು, ಜೆರಾಕ್ಸ್ ನೀಡಿರುತ್ತೇನೆ. ನಮ್ಮ ಮಸೀದಿಯ ಅಧ್ಯಕ್ಷರು ಸದರಿ ಪತ್ರವನ್ನು ನೀಡಿರುತ್ತಾರೆ. ನಮ್ಮ ಮಸೀದಯಲ್ಲಿರುವ ನಿರ್ದೇಶಕರು ನಿಸಾರ್ ಬಂದಿರುತ್ತಾರೆ.ಈ ಲಾರಿ ಬಿಟ್ಟರೆ ಬೇರೆ ನಮಗೆ ಜೀವನಕ್ಕೆ ದಾರಿ ಇರುವುದಿಲ್ಲ. ಈ ಲಾರಿಯನ್ನು ಯಾವತ್ತೂ ನಾವು ಅಕ್ರಮ

ಕೆಲಸಕ್ಕೆ ಉಪಯೋಗಿಸಿರಲಿಲ್ಲ. ನಿಂತ ಲಾರಿಯನ್ನು ಯಾರೋ ಕದ್ದು ಕೊಂಡು ಹೋಗಿ ಅಕ್ರಮ ಸಾಗಾಣಿಕೆ ಮಾಡಿರುತ್ತಾರೆ. ಇದರಲ್ಲಿ ನಾನು ಯಾವುದೇ ರೀತಿಯಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷವಾದ ಭಾಗಿಯಾಗಿರುವುದಿಲ್ಲ. ಆದ್ದರಿಂದ ನನ್ನ ಲಾರಿಯನ್ನು ನನಗೆ ಬಿಟ್ಟುಕೊಡಬೇಕಾಗಿ ಪ್ರಾರ್ಥನೆ".

ಪಾಟೀಸವಾಲು : ಸಸಅ ರವರಿಂದ "ನಮ್ಮ ಮನೆಯಲ್ಲಿ ನಾನು ನನ್ನ ಹೆಂಡತಿ ಮತ್ತು 3 ಜನ ಮಕ್ಕಳೊಂದಿಗೆ ವಾಸಿಸುದ್ದೇನೆ. ಉಳವಿ ಸಣ್ಣ ಗ್ರಾಮ ವಾಗಿದ್ದು ಎಲ್ಲರೂ ಒಬ್ಬರಿಗೊಬ್ಬರು ಪರಿಚಿತರು. ಪ್ರತಿಯೊಬ್ಬರ ಕಷ್ಟ ಸುಖಗಳಲ್ಲಿ ಭಾಗಿಯಾಗುತ್ತೇವೆ. ಉಳವಿಯಲ್ಲಿ ನಮ್ಮ ಸಮಾಜದ 150 ಮನೆಗಳಿವೆ. ನನ್ನ ಮನೆಯ ಅಕ್ಕಪಕ್ಕ 10-12 ನಮ್ಮ ಸಮುದಾಯದ ಮನೆಗಳಿವೆ. ಎಲ್ಲರೊಂದಿಗೆ ನಾವು ಪ್ರೀತಿ ವಿಶ್ವಾಸದಿಂದ ಇದ್ದೇವೆ. ನನ್ನ ಲಾರಿಯನ್ನು ಚಿಕ್ಕ ಮಗ ಓಡಿಸುತ್ತಿದ್ದ. ಚಿಕ್ಕ ಮಗನ ಹೆಸರು ರುಕ್ಮುದ್ದೀನ್ ಎಂದಿರುತ್ತದೆ. ದೊಡ್ಡ ಮಕ್ಕಳಿಗೂ ಸಹ ಓಡಿಸಲು ಬರುತ್ತದೆ. ಚಿಕ್ಕವನಿಗೆ ಆರೋಗ್ಯ ಸರಿ ಇಲ್ಲ. ದೊಡ್ಡವರು ಆರೋಗ್ಯವಾಗಿದ್ದಾರೆ. ಮುನ್ನಾ ಚಾಲಕನಾಗಿ ಇದ್ದ ಸಮಯದಲ್ಲಿ ಆತ ನಮ್ಮ ವಾಹನದಲ್ಲಿ ಮಲಗುತ್ತಿದ್ದ. ಅವನು ಭದ್ರಾವತಿಯವನು. ನಾನು, ನನ್ನ ಪೂರ್ಣ ಕುಟುಂಬದವರು ಜಾವಗಲ್‌ಗೆ ಹೋಗಿದ್ದೆವು. ನಮ್ಮ ಅಕ್ಕಪಕ್ಕದ ಮನೆಯವರು ಬಂದಿರಲಿಲ್ಲ. ನಾವು ಹೋಗುವ ಹಿಂದಿನ ದಿನ ಮುನ್ನಾ ಚಾಲಕ ಹೋಗಿ ಬಂದಿದ್ದು, ಬಾಡಿಗೆ ಹೋಗಿ ಬಂದು ವಾಹನದ ಕೀಯನ್ನು ನಮಗೆ ಕೊಟ್ಟಿದ್ದು ಅದು ನಮ್ಮ ಮನೆಯಲ್ಲೇ ಇತ್ತು. ನಾವು ಜಾವಗಲ್‌ಗೆ ಹೋಗುವ ಮೊದಲು ಎದುರು ಹಾಗೂ ಅಕ್ಕಪಕ್ಕದವರಿಗೆ ಮನೆ ನೋಡಿಕೊಳ್ಳಲು ತಿಳಿಸಿ ಹೋಗಿದ್ದೆವು. ನಾವು ಅಂತ್ಯ ಸಂಸ್ಕಾರ ಮುಗಿಸಿ ಬಂದು ನೋಡಿದಾಗ ವಾಹನ ಕಳ್ಳತನವಾಗಿತ್ತು ಎಂಬುದು ಸುಳ್ಳು ಎಂದರೆ ಸರಿಯಲ್ಲ. ನಾವು ಹೋಗುವ ದಿನವೂ ಸಹ ಮುನ್ನನಿಗೆ ಕಲ್ಲು ಸಾಗಿಸಲು ವಾಹನ ವಹಿಸಿದ್ದೆ ಅಂದರೆ ಸರಿಯಲ್ಲ. ಮುನ್ನನ ಪೂರ್ಣ ವಿಳಾಸ ನನಗೆ ಗೊತ್ತಿದ್ದರೂ ಸಹ ಅರಣ್ಯ ಇಲಾಖಾ ಅಧಿಕಾರಿಗಳಿಗೆ ತಿಳಿಸಿರಲಿಲ್ಲ ಎಂದರೆ ಸರಿಯಲ್ಲ. ಮುನ್ನನ ಮೂಲಕ ಅರಣ್ಯ ಉತ್ಪನ್ನ ಸಾಗಿಸುತ್ತಿದ್ದೆವು ಈಗ ವಾಹನ ಬಿಡಿಸುವ ಸಲುವಾಗಿ ಸುಳ್ಳು ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. 29-11-2009ರಂದು ದೂರು ಕೊಡಲು ಹೋಗಿದ್ದೆವು. ವಾಹನ ಕಳುವಾದ ವಿಷಯವನ್ನು ನನಗೆ ಯಾರೂ ತಿಳಿಸಲಿಲ್ಲ. ನಾನು ವಾಹನದ ಕೀಯನ್ನು ವಾಹನದ ಬಾಕ್ಸ್‌ನಲ್ಲಿ ಇಡುತ್ತಿದ್ದೆ. ಈ ವಿಷಯ ನನಗೂ ಮತ್ತು ಮುನ್ನನಿಗೂ ಗೊತ್ತು. ವಾಹನವನ್ನು ಅಕ್ರಮ ಚಟುವಟಿಕೆಗೆ ಉಪಯೋಗಿಸಿ ಈಗ ಸುಳ್ಳು ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ".

ವಾದಿ ಕಡೆಯ ವಕೀಲರು ದಿ:29-11-2010 ರಂದು ವಾದ ಮಂಡಿಸಿ, ಈ ವಾಹನವನ್ನು ಬಾಧ್ಯತೆದಾರರು ಶ್ರೀರಾಮ್ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಕಂಪನಿ ಲಿ. ಸಾಗರ ಇವರಲ್ಲಿ ಸಾಲ ಪಡೆದು ಉಳುವಿಯ ರಸೂಲ್ ಸಾಬ್ ಇವರಿಂದ ಈ ಲಾರಿಯನ್ನು ಖರೀದಿಸಿದೆಂದು ಈ ಲಾರಿಯಿಂದ ಬರುವ ಬಾಡಿಗೆಯಿಂದ ಕುಟುಂಬ ಸದಸ್ಯರ ಜೀವನ ನಡೆಸಬೇಕಾಗಿದೆಂದು ಮತ್ತು ಕಾನೂನನ್ನು ಗೌರವಿಸುವ ವ್ಯಕ್ತಿಯೆಂದು, ಇವರ ಮೇಲೆ ಯಾವುದೇ ಕ್ರಿಮಿನಲ್ ಕೇಸು ಇಲ್ಲವೆಂದು ಮತ್ತು ಈ ವಾಹನಕ್ಕೆ ತಾತ್ಕಾಲಿಕ ವಾಹನ ಚಾಲಕರನ್ನು ನೇಮಿಸಿದ್ದರೆಂದು ಮತ್ತು ಬಕ್ರೀದ್ ಹಬ್ಬದ ಹಿಂದಿನ ದಿನ ಮನೆಯ ಮುಂದೆ ಈ ವಾಹನವನ್ನು ನಿಲ್ಲಿಸಿದೆಂದು ಮತ್ತು ಅರ್ಜಿದಾರರ ಧರ್ಮ ಗುರುಗಳು ತೀರಿಕೊಂಡ ಕಾರಣ, ಅವರ ಅಂತಿಮ ದರ್ಶನಕ್ಕೆ ಮನೆಯವರೆಲ್ಲ ಚಿಕ್ಕಮಗಳೂರಿಗೆ ಹೋಗಿದ್ದರೆಂದು, ಈ ಬಗ್ಗೆ ಅಧ್ಯಕ್ಷರು ಜಾಮಿಯಾ-ಮಸಜೀದ್-ಮದರಸ ಉಳವಿ ಸೊರಬ ತಾ॥ ಇವರು ಈ ನ್ಯಾಯಾಲಯಕ್ಕೆ ಪತ್ರದ ಮೂಲಕ ಅರಿಕೆಮಾಡಿಕೊಂಡಿರುತ್ತಾರೆಂದು, ಇದನ್ನು ಡಿ1 ಎಂದು ಗುರುತಿಸಲಾಗಿದೆಂದು, ದಿ:29-11-2009 ರಂದು ನೋಡುವಾಗ ಮನೆಯ ಮುಂದಿನ ಲಾರಿ ಕಳ್ಳತನವಾಗಿದೆಂದು, ಈ ಬಗ್ಗೆ ಪೋಲೀಸ್ ಠಾಣೆಗೆ ದೂರು ನೀಡಲು ಅದನ್ನು ಅವರು ಸ್ವೀಕರಿಸದೇ ಈ ವಾಹನವನ್ನು ಅರಣ್ಯ ಅಧಿಕಾರಿ ಜಪ್ತು ಮಾಡಿ ಕೇಸು ದಾಖಲಿಸಿರುತ್ತಾರೆಂದು ತಿಳಿಸಿದರು. ಇದನ್ನು ಯಾರೋ ಕಳ್ಳತನ ಮಾಡಿ ನಾಲ್ಕು ಸಾಗುವಾನಿ ತುಂಡುಗಳನ್ನು ಅಕ್ರಮವಾಗಿ ಸಾಗಾಣಿಕೆಗೆ ಉಪಯೋಗಿಸಿರುತ್ತಾರೆಂದು, ಈ ಬಗ್ಗೆ ಚಾಲಕ ಮತ್ತು ಇತರೆ ಆರೋಪಿಗಳನ್ನು ಪ್ರಾಸಿಕ್ಯೂಷನ್ ರವರು ಹಿಡಿದು ತನಿಖೆ ಮಾಡಿರುವುದಿಲ್ಲ. ಅರ್ಜಿದಾರರ ವಾಹನ ಮಾತ್ರ ಹಿಡಿದು ಕೇಸು ದಾಖಲಿಸಿರುತ್ತಾರೆಂದು ಈ ಬಗ್ಗೆ ಹೆಚ್ಚಿನ ತನಿಖೆ ಮಾಡಿದಲ್ಲಿ ನಿಜವಾದ ಆರೋಪಿಗೆ ಶಿಕ್ಷೆಯನ್ನು ಕೊಡಬಹುದಾಗಿತ್ತು. ಭಾದ್ಯತೆದರಿಗೂ ಜಪ್ತಾದ ಸಾಗುವಾನಿ ನಾಟಾಕ್ಕು ಯಾವುದೇ ಸಂಬಂದವಿಲ್ಲವೆಂದು, ಅಲ್ಲದೇ ಆರ್.ಸಿ. ಮಾಲೀಕರು ಈ ಪ್ರಕರಣದಲ್ಲಿ ಭಾಗಿಯಾಗಿಲ್ಲವೆಂದು, ಜಪ್ತಾದ ಸಾಗುವಾನಿ ನಾಟಾ, ಆ ನಾಟಾವನ್ನು ಯಾರ ಹಿತ್ತಲಿನಿಂದ ಕಡಿದರೆಂದು ಗೊತ್ತಿಲ್ಲವೆಂದು, ಆರ್.ಸಿ. ಮಾಲೀಕರು ಭಾಗಿಯಾಗಿದ್ದರೆ ಎನ್ನುವುದಕ್ಕೆ ಇವರ ಮೇಲೆ ಪ್ರಾಸಿಕ್ಯೂಷನ್‌ರವರು ಯಾವುದೇ ಕ್ರಿಮಿನಲ್ ಕೇಸು ಹಾಕಿಯಿಲ್ಲವೆಂದು ಮತ್ತು ಯಾವುದೇ ಸಾಕ್ಷ್ಯಧಾರಗಳನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸಿಲ್ಲವೆಂದು, ಆದ್ದರಿಂದ ವಾಹನವನ್ನು ವಾಹನ ಮಾಲೀಕರಿಗೆ ಸಂಪೂರ್ಣವಾಗಿ ಬಿಟ್ಟುಕೊಡಲು ಕೋರಿರುತ್ತಾರೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:29-01-2011ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನದ ಸಮೇತ ವಲಯ ಅರಣ್ಯಾಧಿಕಾರಿ, ಸೊರಬ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಮಿನಿಲಾರಿ ನಂ:ಕೆಎ-15-ಎ-786 ರಲ್ಲಿ ಸಾಗುವಾನಿ ನಾಟಾ 10=0.324 ಎಂ3ನ್ನು ದಿ:27-11-2009 ರಂದು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಲಾಗಿತ್ತೆ. ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸವರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಮಿನಿಲಾರಿಯಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಸಾಗುವಾನಿ ನಾಟಾ ಸಾಗಿಸಲು ಶಾಮಿಲಾಗಿದ್ದಾರೆಯೇ ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ

2. ಎರಡನೇ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:27–11–2009 ರಂದು ಸೊರಬ ವಲಯದ ಉಳುವಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ರಾತ್ರಿ ಗಸ್ತುನ್ನು ಸೊರಬ ತಾ॥ ಕ್ಯಾಸನೂರು ಮನ್ನಾ–ಜಂಗ್ಲಿಯ ಭದ್ರಾಪುರ ಸಾಗುವಾನಿ ನೆಡುತೋಪಿನಲ್ಲಿ ಮಾಡುತ್ತಿರುವಾಗ ಒಂದು ವಾಹನ ಮಿನಿಲಾರಿ ನಂ: ಕೆಎ–15–ಎ–786ರಲ್ಲಿ 10 ಸಾಗುವಾನಿ ನಾಟಾ 0.324 ಎಂ3ನ್ನು ಅಕ್ರಮವಾಗಿ ಸಾಗಿಸಿದ ಬಗ್ಗೆ ಕೇಸು ದಾಖಲಿಸಿ ವಾಹನ ಮತ್ತು ಸಾಗುವಾನಿ ನಾಟಾವನ್ನು ಇಲಾಖಾಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಸಾಗುವಾನಿ ನಾಟಾಗಳನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಜಾಫರ್‌ಸಾಬ್ ಬಿನ್ ಚೌಂದೂಸಾಬ್, 62 ವರ್ಷ, ದೂಗೂರು ವಾಸಿ, ಉಳುವಿ ಹೋಬಳಿ, ಸೊರಬ ತಾ॥ ಇವರು ದಿ:18–12–2009 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:02–01–2010ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಆರ್.ಸಿ. ಮಾಲೀಕರು ಈ ವಾಹನವನ್ನು ಮಧ್ಯಂತರ ಸುಪರ್ದಿಗೆ ಬಿಟ್ಟುಕೊಡಲು ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿ ಮೇಲೆ ಯಾವುದೇ ಆದೇಶ ಮಾಡಬಾರದೆಂದು ಮತ್ತು ಪ್ರಕರಣವನ್ನು ಸಾಕ್ಷಿಗಳ ಹೇಳಿಕೆಯನ್ನು ಪಡೆಯಲು ದಿನಾಂಕ ನಿಗದಿಪಡಿಸಲು ವಾದಿಯ ಪರ ವಕೀಲರು ಕೋರಿರುತ್ತಾರೆ. ಮತ್ತು ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆದಿದೆ. ಮತ್ತು ಡಿಫೆನ್ಸ್ ವಾದ ಮಂಡಿಸಿರುತ್ತಾರೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:27–11–2009 ರಂದು ಮಿನಿಲಾರಿ ನಂ:ಕೆಎ–15–ಎ–786ರಲ್ಲಿ 10 ಸಾಗುವಾನಿ ನಾಟಾ 0.324 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ, ಸೊರಬ ವಲಯದ ಉಳುವಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಕೇಸು ದಾಖಲಿಸಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಮತ್ತು ಈ ನ್ಯಾಯಾಲಯಕ್ಕೆ ವಲಯ ಅರಣ್ಯಾಧಿಕಾರಿ, ಸೊರಬ ವಲಯ ಇವರು ವಿಚಾರಣಾ ವರದಿಯೊಂದಿಗೆ ಸಲ್ಲಿಸಿದ್ದಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ:18–12–2009ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಬಾಧ್ಯತೆದಾರರಾಗಲೀ, ಚಾಲಕನಾಗಲೀ ಅವರ ಪ್ರತಿನಿಧಿಗಳಾಗಲೀ ಈ ಕೇಸಿನಲ್ಲಿ ವಶಪಡಿಸಿಕೊಂಡ ಮಿನಿಲಾರಿಯನ್ನು ಅಕ್ರಮ ಸಾಗಾಣಿಕೆಗೆ ಬಳಸದಂತೆ ಮುನ್ನೆಚರಿಕೆ ಕ್ರಮ ತೆಗೆದುಕೊಂಡ ಬಗ್ಗೆಯಾಗಲೀ, ಮತ್ತು ಈ ವಾಹನಕ್ಕೆ ರೂಕಮುದ್ದಿನ್ ಎನ್ನುವ ಚಾಲಕನ್ನು ನೇಮಿಸಿಕೊಂಡ ಬಗ್ಗೆ ಅವನಿಗೆ ಖಾಯಿಲೆ ಬಂದ ಬಗ್ಗೆ ಹಾಗೂ ಬಿಟ್ಟು ಹೋದ ಬಗ್ಗೆಯಾಗಲೀ ಮತ್ತು ಈ ಘಟನೆಯ ಹಿಂದಿನ ದಿನ ಈ ವಾಹನವನ್ನು ಅವರ ಮನೆಯ ಮುಂದೆ ರಾತ್ರಿ ನಿಲ್ಲಿಸಿದ ಬಗ್ಗೆಯಾಗಲೀ, ಅದನ್ನು ಕಳ್ಳರು ಅಪಹರಿಸಿದ ಬಗ್ಗೆಯಾಗಲೀ ಸಂಬಂಧಪಟ್ಟ ಪೋಲೀಸ್ ಠಾಣೆಗೆ ದೂರು ನೀಡಿದ ಬಗ್ಗೆ ತಿಳಿಸಿದಂತೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಹಾಗೂ ಸಾಮಾನ್ಯವಾಗಿ ಮನೆಯಲ್ಲಿ ಯಾರು ಇಲ್ಲದ ಸಮಯದಲ್ಲಿ ಇಂತಹ ಬೆಲೆಬಾಳುವ ವಾಹನವನ್ನು ಮನೆಯ ಮುಂದೆ ನಿಲ್ಲಿಸಿ, ಯಾರು ಹೋಗುವುದಿಲ್ಲ. ಒಂದು ವೇಳೆ ಅಂತಹ ಸಂದರ್ಭದಲ್ಲಿ ಈ ವಾಹನವನ್ನು ಬೇರೆಯವರಿಗೆ ಅಂದರೆ, ಚಾಲಕನಿಗೆ ಅಥವಾ ಪ್ರತಿನಿಧಿಗಳ ಸುಪರ್ದಿಗೆ ವಹಿಸಿ ಹೋಗುತ್ತಾರೆ. ಅದರಂತೆ ಡಿಫೆನ್ಸ್ ಸಾಕ್ಷಿ ಒಂದನೇ ಮತ್ತು ಎರಡನೇಯವರು ಸದರಿ ವಾಹನವನ್ನು ಚಾಲಕನಿಗೆ ವಹಿಸಿ ಹೋಗಿದ್ದೆವೆಂದು, ಚಾಲಕನ್ನು ವಾಹನದಲ್ಲಿ ಮಲಗುತ್ತಿದ್ದನೆಂದು ಸಾಕ್ಷಿ ನುಡಿದಿರುತ್ತಾರೆ.

ಅಲ್ಲದೇ ಇದೇ ತರಹದ ಪ್ರಕರಣದಲ್ಲಿ ಗೌರವಾನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಬಯಸುತ್ತೇನೆ.

The Hon'ble high Court of Karnataka Bangalore in the case of - Ramesh N Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any

of them. ……………………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse. ಅಲ್ಲದೇ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಸೊರಬ ವಲಯ, ಸಾಗರ ಇವರು ಜಪ್ತು ಮಾಡಿದ ಕ್ಯಾಂಟರ್ ಕೆಎ–15–ಎ–786ನ್ನು ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಸಾಗುವಾನಿ ನಾಟಾ 10=0.324 ಎಂ3 ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಕ್ಯಾಂಟರ್ ಕೆಎ–15–ಎ–786ನ್ನು ಮತ್ತು ಈ ವಾಹನದಲ್ಲಿದ್ದ ಸಾಗುವಾನಿ 10=0.324 ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:19–02–2011 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

ಪಿ.ಆರ್.319

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ.ವಿವ. 38/09–10, ದಿನಾಂಕ: 27–11–2010**

| | |
|---|---|
| ಉಪಸ್ಥಿತರು | : ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಣ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| ಪಿರ್ಯಾಧಿದಾರರು | : ವಲಯ ಅರಣ್ಯಾಧಿಕಾರಿ,<br>ಸಾಗರ ವಲಯ, (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| ಆರೋಪಿಗಳು | : 1) ಬಸವರಾಜ 2) ಗುರುರಾಜ ಸಿ. |
| ಭಾದ್ಯತೆದಾರರು | : ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ. |

**ಪ್ರಸ್ತಾವನೆ:–**

ದಿ:03–12–2009 ರಂದು ರಾತ್ರಿ ಸಾಗರ ವಲಯದ ತ್ಯಾಗರ್ತಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಇಲಾಖಾ ವಾಹನದಲ್ಲಿ ರಾತ್ರಿ ಗಸ್ತು ಮಾಡಿಕೊಂಡು ಕಲ್‌ಕೊಪ್ಪದ ಹತ್ತಿರ ಕಾಯುತ್ತಿರುವಾಗ ದಿ:04–12–2009ರ ಸುಮಾರು ಬೆಳಿಗ್ಗೆ–3.00 ಗಂಟೆ ಸಮಯದಲ್ಲಿ ಒಂದು ಮಾರುತಿ ವ್ಯಾನ್ ತ್ಯಾಗರ್ತಿ ಕಡೆಯಿಂದ ಬರುತ್ತಿರುವುದನ್ನು ತಪಾಸಣೆ ಮಾಡಲು ನಿಲ್ಲಿಸಲು ಕೈ ಮಾಡಿದಾಗ ವಾಹನವು ನಿಲ್ಲಿಸದೇ ಕೊರ್ಲಿಕೊಪ್ಪ ಕಡೆ ವೇಗವಾಗಿ ಓಡಿಸಿದಾಗ ಇಲಾಖಾ ವಾಹನದಲ್ಲಿ ಬೆನ್ನಟ್ಟಿ ಗಾಳಿಯಲ್ಲಿ ಗುಂಡು ಎರಡು ಸುತ್ತು ಹಾರಿಸಿದಾಗ ಸಾಗರ ತಾ. ಕಸಬಾ ಹೋಬಳಿ ಕಲ್‌ಕೊಪ್ಪದಿಂದ ಕೊರ್ಲಿಕೊಪ್ಪ ಗ್ರಾಮಕ್ಕೆ ಹೊಗುವ ಲೋಕೊಪಯೊಗಿ ರಸ್ತೆಯಲ್ಲಿ ತೆಪ್ಪಗೋಡು ಕ್ರಾಸ್ ಹತ್ತಿರ ವಾಹನವನ್ನು ಬಿಟ್ಟು ವಾಹನದಲ್ಲಿದ್ದ ಆಸಾಮಿಗಳು ಕೈಗೆ ಸಿಗದೇ ಓಡಿಹೋಗಿರುತ್ತಾರೆ. (1)ನೇಯವನು ಬಸವರಾಜ ಬಿನ್ ಮುರಿಗೆಪ್ಪ, 35 ವರ್ಷ, ತೊಗರ್ಸಿ ವಾಸಿ, ಶಿಕಾರಿಪುರ ತಾ. (2)ನೇಯವನು ಗುರುರಾಜ ಸಿ. ಬಿನ್ ಚಂದ್ರಶೇಖರ, C/O ಬಳ್ಳಾರಿಕೃಷ್ಣ, 23 ವರ್ಷ, (ಡಾ॥ ನೀಲಕಂಠ ರವರ ಮನೆಪಕ್ಕ) ಶಿರಾಳಕೊಪ್ಪ ಶಿಕಾರಿಪುರ ತಾ. ಎಂದು ಗುರುತಿಸಿದ್ದು, ನಂತರ ಸ್ಥಳದಲ್ಲಿ ಬಿಟ್ಟುಹೋದ ವಾಹನವನ್ನು ಪರಿಶೀಲಿಸಿ ನೋಡಲಾಗಿ ಮಾರುತಿ ಓಮ್ನಿ ಕೆಎ–01 ಪಿ–5715, ಛಾಸ್ಸಿಸ್ ನಂ: ST-91-IN-166151, ಇಂಜಿನ್ ನಂಬರ್ ಕಂಡು ಬಂದಿರುವುದಿಲ್ಲ, ಈ ವಾಹನದೊಳಗೆ ಪರಿಶೀಲಿಸಿದಾಗ ಆಗತಾನೆ ಗರಗಸದಿಂದ ಕೊಯ್ತು ಮಾಡಿದ ಬೀಟೆ ಜಾತಿಯ ಆರು ನಾಟಾವಿದ್ದು, ಅದನ್ನು ಅಳತೆಮಾಡಿದಾಗ 0.630ಎಂ3 ಪ್ರಮಾಣವಿದ್ದು, ಈ ನಾಟಾಗಳ ತುದಿಬುಡದಲ್ಲಿ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ. ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 62, 71 (ಎ) ರಿಂದ (ಜಿ), 104 (ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:94/09–10ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:07–12–2009ರಂದು ಆದೇಶವಾಗಿದೆ.

